WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಡಿಸೆಂಬರ್ ೮, ೨೦೧೧ (ಮಾರ್ಗಶಿರ ೧೭, ಶಕ ವರ್ಷ ೧೯೩೩) | ಸಂಚಿಕೆ ೪೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕಂದಾಯ ಸಚಿವಾಲಯ**

**ವಿಷಯ :** ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011ರ ಸೆಕ್ಷನ್ 21 ರನ್ವಯ ದಾವಣಗೆರೆ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 112 ಎಲ್‌ಜಿಎನ್ 81, ದಿನಾಂಕ: 02/11/2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 172 ಮುಸೇವಿ 2001, ದಿನಾಂಕ: 30/04/2003.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 06 ಶಾಸನ 2011, ದಿನಾಂಕ: 04/05/2011.
4. ಸರ್ಕಾರದ ಆದೇಶ ಸಂಖ್ಯೆ: ಕಂಇ 79 ಮುಸೇವಿ 2011, ದಿನಾಂಕ: 13/07/2011.
5. ರಾಜ್ಯ ಧಾರ್ಮಿಕ ಪರಿಷತ್ತಿನ ಸಭಾ ನಡವಳಿ ದಿನಾಂಕ: 30/08/2011.
6. ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಡಿಎಂ 8 ಸಿಆರ್ 136/2011–12, ದಿನಾಂಕ: 08/09/2011.

**ಪ್ರಸ್ತಾವನೆ :**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ವ್ಯವಸ್ಥಾಪನ ಮತ್ತು ಆಡಳಿತಕ್ಕೆ ಉತ್ತಮ ಉಪಬಂಧ ಕಲ್ಪಿಸಲು ಸರ್ಕಾರವು ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ **ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ನ್ನು** ಪ್ರಕಟಿಸಿದೆ.

ಈ ಅಧಿನಿಯಮಕ್ಕೆ ಪೂರಕವಾಗಿ ಸರ್ಕಾರವು ಮೇಲೆ(2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ **ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ನಿಯಮಗಳು, 2002ನ್ನು** ರಚಿಸಲಾಗಿರುತ್ತದೆ. ಈ ನಿಯಮವು ಅಧಿಕೃತವಾಗಿ ದಿನಾಂಕ: 01/05/2003ರಂದು ಜಾರಿಗೆ ಬಂದಿರುತ್ತದೆ.

ಈ ಅಧಿನಿಯಮಕ್ಕೆ ಮತ್ತಷ್ಟು ತಿದ್ದುಪಡಿಯನ್ನು ತರಲು ಸರ್ಕಾರವು ನಿರ್ಧರಿಸಿ, ಮೇಲೆ (3)ರಲ್ಲಿ ಓದಲಾದ ಅಧಿಸೂಚನೆಯಲ್ಲಿ, **ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ 2011ನ್ನು** ರಚಿಸಿದೆ. ಈ ತಿದ್ದುಪಡಿ ಅಧಿನಿಯಮವು ಅಧಿಕೃತವಾಗಿ ದಿನಾಂಕ: 04/05/2011 ರಂದು ಜಾರಿಗೆ ಬಂದಿರುತ್ತದೆ.

ಈ ತಿದ್ದುಪಡಿ ಅಧಿನಿಯಮದ ಸೆಕ್ಷನ್–20ರಲ್ಲಿ ರಾಜ್ಯ ಧಾರ್ಮಿಕ ಪರಿಷತ್ತನ್ನು ರಚಿಸುವ ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಅದರನ್ವಯ, ಸರ್ಕಾರವು ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ಮಾನ್ಯ ಉನ್ನತ ಶಿಕ್ಷಣ, ಯೋಜನೆ, ಸಾಂಖ್ಯಿಕ, ಮುಜರಾಯಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವರ ಅಧ್ಯಕ್ಷತೆಯಲ್ಲಿ ಕರ್ನಾಟಕ ರಾಜ್ಯ ಧಾರ್ಮಿಕ ಪರಿಷತ್ತನ್ನು ರಚಿಸಲಾಗಿರುತ್ತದೆ.

ಪ್ರಸ್ತಾಪಿತ ತಿದ್ದುಪಡಿಯ ಅಧಿನಿಯಮ ಸೆಕ್ಷನ್–20ಎ ರಲ್ಲಿ ರಾಜ್ಯ ಧಾರ್ಮಿಕ ಪರಿಷತ್ತು ನಿರ್ವಹಿಸಬೇಕಾದ ಅಧಿಕಾರ ಮತ್ತು ಪ್ರಕಾರ್ಯಗಳನ್ನು ಗೊತ್ತುಪಡಿಸಲಾಗಿರುತ್ತದೆ.

ದಿನಾಂಕ: 30/08/2011 ರಂದು ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯು, ಸದರಿ ಪರಿಷತ್ತಿನ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಭೆಯಲ್ಲಿ ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸುವ ಬಗ್ಗೆ ಸಮಾಲೋಚಿಸಲಾಯಿತು. ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011ರ ಸೆಕ್ಷನ್–21ರ ಪ್ರಕಾರ, ದಾವಣಗೆರೆ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ಈ ಕೆಳಕಂಡ

ಸದಸ್ಯರನ್ನೊಳಗೊಂಡಂತೆ ರಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸಭೆಯಲ್ಲಿ ನಿರ್ಣಯವನ್ನು ಕೈಗೊಳ್ಳಲಾಯಿತು (ಉಲ್ಲೇಖ-ಮೇಲೆ(5)ರಲ್ಲಿ ಓದಲಾದ ಸಭಾ ನಡವಳಿ):

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1 | ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ | ಅಧ್ಯಕ್ಷರು |
| 2 | ಧಾರ್ಮಿಕ ದತ್ತಿ ತಹಶೀಲ್ದಾರ್, ದಾವಣಗೆರೆ | ಪದನಿಮಿತ್ತ ಕಾರ್ಯದರ್ಶಿಗಳು |
| 3 | ಶ್ರೀ ಜೆ. ಚನ್ನವೀರಪ್ಪ, (ನಿವೃತ್ತ ನ್ಯಾಯಾಧೀಶರು), ನಂ. 3501, 3ನೇ ಮುಖ್ಯರಸ್ತೆ, ಎಂ.ಸಿ.ಸಿ 'ಬಿ' ಬ್ಲಾಕ್, ದಾವಣಗೆರೆ ಜಿಲ್ಲೆ. | ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸದಸ್ಯರು |
| 4 | ಶ್ರೀ ಕೆ.ಬಿ. ಶಂಕರನಾರಾಯಣ, ನಂ. 1757/3, 'ಪರಿಮಳ', 16ನೇ ಅಡ್ಡರಸ್ತೆ, ಆಂಜನೇಯ ಬಡಾವಣೆ, ದಾವಣಗೆರೆ ಜಿಲ್ಲೆ. | ಆಗಮ ಸದಸ್ಯರು |
| 5 | ಶ್ರೀ ಚಿದಂಬರ ಶಾಸ್ತ್ರಿ, 'ಆನಂದ ನಿಲಯ' ಕೋಟೆ, ಹರಿಹರ, ದಾವಣಗೆರೆ ಜಿಲ್ಲೆ. | ವೇದ ಸದಸ್ಯರು |
| 6 | ಶ್ರೀ ಸಿ. ಲಕ್ಷ್ಮಣ ಬಿನ್ ಚನ್ನಬಸಪ್ಪ, ಹಳೇ ತಾಲ್ಲೂಕು ಕಛೇರಿ ರಸ್ತೆ, ಜಗಳೂರು, ದಾವಣಗೆರೆ ಜಿಲ್ಲೆ. | ಪರಿಶಿಷ್ಟ ಜಾತಿ/ವರ್ಗ ಸದಸ್ಯರು |
| 7 | ಶ್ರೀಮತಿ ಯಶೋಧಮ್ಮ ಕೋಂ ಎಂ.ಎಸ್. ರಾಜಪ್ಪ, ಚಿಕ್ಕನಹಳ್ಳಿ ಹೊಸ ಬಡಾವಣೆ, ಆಂಜನೇಯ ದೇವಸ್ಥಾನದ ಹತ್ತಿರ, ನಿಟುವಳ್ಳಿ, ದಾವಣಗೆರೆ ಜಿಲ್ಲೆ. | ಮಹಿಳಾ ಸದಸ್ಯರು |
| 8 | ಡಾ: ಜಿತೇಂದ್ರ ಬಿಸಾಟಿ, ಬಿನ್ ನಾಗರಾಜು ಬಿಸಾಟಿ, ಕಡೇಮನೆ ಬೀದಿ, ಹೊನ್ನಾಳಿ, ದಾವಣಗೆರೆ ಜಿಲ್ಲೆ. | ಹಿಂದುಳಿದ ವರ್ಗದ ಸದಸ್ಯರು |
| 9 | ಶ್ರೀ ಕೆ.ಜಿ. ಗಿರೀಶ್, ವಕೀಲರು, ಪಿ.ಎಸ್. ನಿಜಲಿಂಗಪ್ಪ ಕಾಂಪೌಂಡ್ ನಾಯಕನ ಬೀದಿ, ಚನ್ನಗಿರಿ, ದಾವಣಗೆರೆ ಜಿಲ್ಲೆ. | ಸಾಮಾನ್ಯ ಸದಸ್ಯರು |
| 10 | ಶ್ರೀ ಶಂಕರನಾರಾಯಣ ಶಾಸ್ತ್ರಿ, ನಂ. 908, 'ವನಶ್ರೀ' ಶಿವಕುಮಾರಸ್ವಾಮಿ ಬಡಾವಣೆ, 2ನೇ ಹಂತ, ದಾವಣಗೆರೆ ಜಿಲ್ಲೆ. | ಸಾಮಾನ್ಯ ಸದಸ್ಯರು |

ಈ ನಿರ್ಣಯವನ್ನು ಅನುಸರಿಸಿ, ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ, ಬೆಂಗಳೂರು ಇವರು ಮೇಲೆ(6) ರಲ್ಲಿ ಓದಲಾದ ಪತ್ರದಲ್ಲಿ, ದಿನಾಂಕ: 30/08/2011ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ, ತಿದ್ದುಪಡಿ ಅಧಿನಿಯಮದ ಸೆಕ್ಷನ್-21 ರನ್ವಯ ದಾವಣಗೆರೆ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸಬೇಕೆಂದು ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆಯುಕ್ತರು, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 131 ಮುಸೇವಿ 2011(2) ಬೆಂಗಳೂರು, ದಿನಾಂಕ: 20/09/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ಸಂಸ್ಥೆಗಳ (ತಿದ್ದುಪಡಿ) ಅಧಿನಿಯಮ, 2011ರ ಸೆಕ್ಷನ್-21ರನ್ವಯ ಈ ಕೆಳಕಂಡಂತೆ ದಾವಣಗೆರೆ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿ ಸರ್ಕಾರವು ಆದೇಶಿಸಿದೆ:-

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1 | ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ | ಅಧ್ಯಕ್ಷರು |
| 2 | ಶ್ರೀ ಜೆ. ಚನ್ನವೀರಪ್ಪ, (ನಿವೃತ್ತ ನ್ಯಾಯಾಧೀಶರು), ನಂ. 3501, 3ನೇ ಮುಖ್ಯರಸ್ತೆ, ಎಂ.ಸಿ.ಸಿ 'ಬಿ' ಬ್ಲಾಕ್, ದಾವಣಗೆರೆ ಜಿಲ್ಲೆ. | ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸದಸ್ಯರು |
| 3 | ಶ್ರೀ ಕೆ.ಬಿ. ಶಂಕರನಾರಾಯಣ, ನಂ. 1757/3, 'ಪರಿಮಳ', 16ನೇ ಅಡ್ಡರಸ್ತೆ, ಆಂಜನೇಯ ಬಡಾವಣೆ, ದಾವಣಗೆರೆ ಜಿಲ್ಲೆ. | ಆಗಮ ಸದಸ್ಯರು |

| | | |
|---|---|---|
| 4 | ಶ್ರೀ ಚಿದಂಬರ ಶಾಸ್ತ್ರಿ,<br>'ಆನಂದ ನಿಲಯ' ಕೋಟೆ, ಹರಿಹರ,<br>ದಾವಣಗೆರೆ ಜಿಲ್ಲೆ. | ವೇದ ಸದಸ್ಯರು |
| 5 | ಶ್ರೀ ಸಿ. ಲಕ್ಷ್ಮಣ ಬಿನ್ ಚನ್ನಬಸಪ್ಪ,<br>ಹಳೇ ತಾಲ್ಲೂಕು ಕಛೇರಿ ರಸ್ತೆ, ಜಗಳೂರು,<br>ದಾವಣಗೆರೆ ಜಿಲ್ಲೆ. | ಪರಿಶಿಷ್ಟ ಜಾತಿ/ವರ್ಗ ಸದಸ್ಯರು |
| 6 | ಶ್ರೀಮತಿ ಯಶೋಧಮ್ಮ ಕೋಂ ಎಂ.ಎಸ್. ರಾಜಪ್ಪ,<br>ಚಿಕ್ಕನಹಳ್ಳಿ ಹೊಸ ಬಡಾವಣೆ, ಆಂಜನೇಯ ದೇವಸ್ಥಾನದ ಹತ್ತಿರ,<br>ನಿಟುವಳ್ಳಿ, ದಾವಣಗೆರೆ ಜಿಲ್ಲೆ. | ಮಹಿಳಾ ಸದಸ್ಯರು |
| 7 | ಡಾ: ಜಿತೇಂದ್ರ ಬಿಸಾಟಿ,<br>ಬಿನ್ ನಾಗರಾಜು ಬಿಸಾಟಿ, ಕಡೇಮನೆ ಬೀದಿ, ಹೊನ್ನಾಳಿ,<br>ದಾವಣಗೆರೆ ಜಿಲ್ಲೆ. | ಹಿಂದುಳಿದ ವರ್ಗದ ಸದಸ್ಯರು |
| 8 | ಶ್ರೀ ಕೆ.ಜಿ. ಗಿರೀಶ್,<br>ವಕೀಲರು, ಪಿ.ಎಸ್. ನಿಜಲಿಂಗಪ್ಪ ಕಾಂಪೌಂಡ್ ನಾಯಕನ ಬೀದಿ,<br>ಚನ್ನಗಿರಿ, ದಾವಣಗೆರೆ ಜಿಲ್ಲೆ. | ಸಾಮಾನ್ಯ ಸದಸ್ಯರು |
| 9 | ಶ್ರೀ ಶಂಕರನಾರಾಯಣ ಶಾಸ್ತ್ರಿ,<br>ನಂ. 908, 'ವನಶ್ರೀ' ಶಿವಕುಮಾರಸ್ವಾಮಿ ಬಡಾವಣೆ,<br>2ನೇ ಹಂತ, ದಾವಣಗೆರೆ ಜಿಲ್ಲೆ. | ಸಾಮಾನ್ಯ ಸದಸ್ಯರು |
| 10 | ಧಾರ್ಮಿಕ ದತ್ತಿ ತಹಶೀಲ್ದಾರ್, ದಾವಣಗೆರೆ | ಪದನಿಮಿತ್ತ ಕಾರ್ಯದರ್ಶಿಗಳು |

ಈ ಆದೇಶದಲ್ಲಿ ರಚಿಸಲ್ಪಟ್ಟ ದಾವಣಗೆರೆ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತಿನ ಅವಧಿಯು ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ; ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಅಸ್ಥಿತ್ವದಲ್ಲಿರುತ್ತದೆ.

ಈ ಪರಿಷತ್ತು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011ರ ಸೆಕ್ಷನ್ 21ಎ ರಲ್ಲಿ ವಿಹಿತಗೊಳಿಸಿರುವ ಕರ್ತವ್ಯ ಮತ್ತು ಪ್ರಕಾರ್ಯಗಳನ್ನು ನಿರ್ವಹಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2441 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011ರ ಸೆಕ್ಷನ್ 21 ರನ್ವಯ ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 112 ಎಲ್‌ಜಿಎನ್ 81, ದಿನಾಂಕ: 02/11/2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 172 ಮುಸೇವಿ 2001, ದಿನಾಂಕ: 30/04/2003.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 06 ಶಾಸನ 2011, ದಿನಾಂಕ: 04/05/2011.
4. ಸರ್ಕಾರದ ಆದೇಶ ಸಂಖ್ಯೆ: ಕಂಇ 79 ಮುಸೇವಿ 2011, ದಿನಾಂಕ: 13/07/2011.
5. ರಾಜ್ಯ ಧಾರ್ಮಿಕ ಪರಿಷತ್ತಿನ ಸಭಾ ನಡವಳಿ ದಿನಾಂಕ: 30/08/2011.
6. ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಡಿಎಂ 8 ಸಿಆರ್ 136/2011–12, ದಿನಾಂಕ: 08/09/2011.

**ಪ್ರಸ್ತಾವನೆ :**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ವ್ಯವಸ್ಥಾಪನ ಮತ್ತು ಆಡಳಿತಕ್ಕೆ ಉತ್ತಮ ಉಪಬಂಧ ಕಲ್ಪಿಸಲು ಸರ್ಕಾರವು ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ **ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ನ್ನು** ಪ್ರಕಟಿಸಿದೆ.

ಈ ಅಧಿನಿಯಮಕ್ಕೆ ಪೂರಕವಾಗಿ ಸರ್ಕಾರವು ಮೇಲೆ(2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ **ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ನಿಯಮಗಳು, 2002ನ್ನು** ರಚಿಸಲಾಗಿರುತ್ತದೆ. ಈ ನಿಯಮವು ಅಧಿಕೃತವಾಗಿ ದಿನಾಂಕ: 01/05/2003ರಂದು ಜಾರಿಗೆ ಬಂದಿರುತ್ತದೆ.

ಈ ಅಧಿನಿಯಮಕ್ಕೆ ಮತ್ತಷ್ಟು ತಿದ್ದುಪಡಿಯನ್ನು ತರಲು ಸರ್ಕಾರವು ನಿರ್ಧರಿಸಿ, ಮೇಲೆ (3)ರಲ್ಲಿ ಓದಲಾದ ಅಧಿಸೂಚನೆಯಲ್ಲಿ, **ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ 2011ನ್ನು** ರಚಿಸಿದೆ. ಈ ತಿದ್ದುಪಡಿ ಅಧಿನಿಯಮವು ಅಧಿಕೃತವಾಗಿ ದಿನಾಂಕ: 04/05/2011 ರಂದು ಜಾರಿಗೆ ಬಂದಿರುತ್ತದೆ.

ಈ ತಿದ್ದುಪಡಿ ಅಧಿನಿಯಮದ ಸೆಕ್ಷನ್–20ರಲ್ಲಿ ರಾಜ್ಯ ಧಾರ್ಮಿಕ ಪರಿಷತ್ತನ್ನು ರಚಿಸುವ ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಅದರನ್ವಯ, ಸರ್ಕಾರವು ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ಮಾನ್ಯ ಉನ್ನತ ಶಿಕ್ಷಣ, ಯೋಜನೆ, ಸಾಂಖ್ಯಿಕ, ಮುಜರಾಯಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವರ ಅಧ್ಯಕ್ಷತೆಯಲ್ಲಿ ಕರ್ನಾಟಕ ರಾಜ್ಯ ಧಾರ್ಮಿಕ ಪರಿಷತ್ತನ್ನು ರಚಿಸಲಾಗಿರುತ್ತದೆ.

ಪ್ರಸ್ತಾಪಿತ ತಿದ್ದುಪಡಿಯ ಅಧಿನಿಯಮ ಸೆಕ್ಷನ್–20ಎ ರಲ್ಲಿ ರಾಜ್ಯ ಧಾರ್ಮಿಕ ಪರಿಷತ್ತು ನಿರ್ವಹಿಸಬೇಕಾದ ಅಧಿಕಾರ ಮತ್ತು ಪ್ರಕಾರ್ಯಗಳನ್ನು ಗೊತ್ತುಪಡಿಸಲಾಗಿರುತ್ತದೆ.

ದಿನಾಂಕ: 30/08/2011 ರಂದು ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯು, ಸದರಿ ಪರಿಷತ್ತಿನ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಭೆಯಲ್ಲಿ ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸುವ ಬಗ್ಗೆ ಸಮಾಲೋಚಿಸಲಾಯಿತು. ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011ರ ಸೆಕ್ಷನ್–21ರ ಪ್ರಕಾರ, ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸಭೆಯಲ್ಲಿ ನಿರ್ಣಯವನ್ನು ಕೈಗೊಳ್ಳಲಾಯಿತು (ಉಲ್ಲೇಖ–ಮೇಲೆ(5)ರಲ್ಲಿ ಓದಲಾದ ಸಭಾ ನಡವಳಿ):

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1 | ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ | ಅಧ್ಯಕ್ಷರು |
| 2 | ಧಾರ್ಮಿಕ ದತ್ತಿ ತಹಶೀಲ್ದಾರ್, ಶಿವಮೊಗ್ಗ | ಪದನಿಮಿತ್ತ ಕಾರ್ಯದರ್ಶಿಗಳು |
| 3 | ಶ್ರೀ ಸುರೇಶ್, (ನಿವೃತ್ತ ನ್ಯಾಯಾಧೀಶರು) ಗೋಪಾಲಗೌಡ ಬಡಾವಣೆ ಮುಖ್ಯರಸ್ತೆ, ಶಿವಮೊಗ್ಗ ಜಿಲ್ಲೆ. | ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸದಸ್ಯರು |
| 4 | ಶ್ರೀ ರೇಣುಕಾರಾಧ್ಯ, ಉಪನ್ಯಾಸಕರು, ಚೆಕ್ಕಿನ ಕಲ್ಮಠ, ಶಿವಮೊಗ್ಗ | ಆಗಮ ಸದಸ್ಯರು |
| 5 | ಶ್ರೀ ಅ.ಪ. ರಾಮಭಟ್ಟ, ಅರ್ಚಕರು, ಗಣಪತಿ ದೇವಸ್ಥಾನ, ರವೀಂದ್ರ ನಗರ, ಶಿವಮೊಗ್ಗ. | ವೇದ ಸದಸ್ಯರು |
| 6 | ಶ್ರೀ ಶಾಂತಪ್ಪ ಬಿನ್ ಹುಚ್ಚರಾಯಪ್ಪ, ಪುನೇದಹಳ್ಳಿ, ಸಂಡ ಅಂಚೆ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಪರಿಶಿಷ್ಟ ಜಾತಿ/ವರ್ಗ ಸದಸ್ಯರು |
| 7 | ಶ್ರೀಮತಿ ರಂಜನಿ ಕೋಂ ಎಸ್. ದತ್ತಾತ್ರಿ, 'ಆಶ್ರಿತ' 1ನೇ ಕ್ರಾಸ್, 60 ಅಡಿ ರಸ್ತೆ, ವಿನೋಬನಗರ, ಶಿವಮೊಗ್ಗ. | ಮಹಿಳಾ ಸದಸ್ಯರು |
| 8 | ಶ್ರೀ ರಮೇಶ್ ಬಾಬು, ಗಾಂಧಿನಗರ, ಭಾರತ್ ಗ್ಯಾಸ್ ಹಿಂಭಾಗ, ಶಿವಮೊಗ್ಗ. | ಹಿಂದುಳಿದ ವರ್ಗದ ಸದಸ್ಯರು |
| 9 | ಶ್ರೀ ನವೀನ್, ಹೆದ್ದೂರು ಅಂಚೆ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಸಾಮಾನ್ಯ ಸದಸ್ಯರು |
| 10 | ಶ್ರೀ ಬಂಗಾರಪ್ಪ ಗೌಡ, ಕಮರೂರು, ಜಡೆ ಹೋಬಳಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಸಾಮಾನ್ಯ ಸದಸ್ಯರು |

ಈ ನಿರ್ಣಯವನ್ನು ಅನುಸರಿಸಿ, ಆಯುಕ್ತರು, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ, ಬೆಂಗಳೂರು ಇವರು ಮೇಲೆ(6) ರಲ್ಲಿ ಓದಲಾದ ಪತ್ರದಲ್ಲಿ, ದಿನಾಂಕ: 30/08/2011ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ, ತಿದ್ದುಪಡಿ ಅಧಿನಿಯಮದ ಸೆಕ್ಷನ್–21 ರನ್ವಯ ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸಬೇಕೆಂದು ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 131 ಮುಸೇವಿ 2011(1) ಬೆಂಗಳೂರು, ದಿನಾಂಕ: 20/09/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ಸಂಸ್ಥೆಗಳ (ತಿದ್ದುಪಡಿ) ಅಧಿನಿಯಮ, 2011ರ ಸೆಕ್ಷನ್–21ರನ್ವಯ ಈ ಕೆಳಕಂಡಂತೆ ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿ ಸರ್ಕಾರವು ಆದೇಶಿಸಿದೆ:–

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1 | ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ | ಅಧ್ಯಕ್ಷರು |
| 2 | ಶ್ರೀ ಸುರೇಶ್, (ನಿವೃತ್ತ ನ್ಯಾಯಾಧೀಶರು) ಗೋಪಾಲಗೌಡ ಬಡಾವಣೆ ಮುಖ್ಯರಸ್ತೆ, ಶಿವಮೊಗ್ಗ ಜಿಲ್ಲೆ. | ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸದಸ್ಯರು |

| | | |
|---|---|---|
| 3 | ಶ್ರೀ ರೇಣುಕಾರಾಧ್ಯ, ಉಪನ್ಯಾಸಕರು, ಚೆಕ್ಕಿನ ಕಲ್ಮಠ, ಶಿವಮೊಗ್ಗ | ಆಗಮ ಸದಸ್ಯರು |
| 4 | ಶ್ರೀ ಅ.ಪ. ರಾಮಭಟ್ಟ,<br>ಅರ್ಚಕರು, ಗಣಪತಿ ದೇವಸ್ಥಾನ, ರವೀಂದ್ರ ನಗರ, ಶಿವಮೊಗ್ಗ. | ವೇದ ಸದಸ್ಯರು |
| 5 | ಶ್ರೀ ಶಾಂತಪ್ಪ ಬಿನ್ ಹುಚ್ಚರಾಯಪ್ಪ,<br>ಪುನೇದಹಳ್ಳಿ, ಸಂಡ ಅಂಚೆ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಪರಿಶಿಷ್ಟ ಜಾತಿ/ವರ್ಗ ಸದಸ್ಯರು |
| 6 | ಶ್ರೀಮತಿ ರಂಜನಿ ಕೋಂ ಎಸ್. ದತ್ತಾತ್ರಿ,<br>'ಆಶ್ರಿತ' 1ನೇ ಕ್ರಾಸ್, 60 ಅಡಿ ರಸ್ತೆ, ವಿನೋಬನಗರ, ಶಿವಮೊಗ್ಗ. | ಮಹಿಳಾ ಸದಸ್ಯರು |
| 7 | ಶ್ರೀ ರಮೇಶ್ ಬಾಬು,<br>ಗಾಂಧಿನಗರ, ಭಾರತ್ ಗ್ಯಾಸ್ ಹಿಂಭಾಗ, ಶಿವಮೊಗ್ಗ. | ಹಿಂದುಳಿದ ವರ್ಗದ ಸದಸ್ಯರು |
| 8 | ಶ್ರೀ ನವೀನ್,<br>ಹೆದ್ದೂರು ಅಂಚೆ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಸಾಮಾನ್ಯ ಸದಸ್ಯರು |
| 9 | ಶ್ರೀ ಬಂಗಾರಪ್ಪ ಗೌಡ,<br>ಕಮರೂರು, ಜಡೆ ಹೋಬಳಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಸಾಮಾನ್ಯ ಸದಸ್ಯರು |
| 10 | ಧಾರ್ಮಿಕ ದತ್ತಿ ತಹಶೀಲ್ದಾರ್, ಶಿವಮೊಗ್ಗ | ಪದನಿಮಿತ್ತ ಕಾರ್ಯದರ್ಶಿಗಳು |

ಈ ಆದೇಶದಲ್ಲಿ ರಚಿಸಲ್ಪಟ್ಟ ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತಿನ ಅವಧಿಯು ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ; ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಅಸ್ಥಿತ್ವದಲ್ಲಿರುತ್ತದೆ.

ಈ ಪರಿಷತ್ತು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011ರ ಸೆಕ್ಷನ್ 21ಎ ರಲ್ಲಿ ವಿಹಿತಗೊಳಿಸಿರುವ ಕರ್ತವ್ಯ ಮತ್ತು ಪ್ರಕಾರ್ಯಗಳನ್ನು ನಿರ್ವಹಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 2442

## ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011ರ ಸೆಕ್ಷನ್ 21 ರನ್ವಯ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಲಾ 112 ಎಲ್‌ಜಿಎನ್ 81, ದಿನಾಂಕ 02-11-2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 172 ಮುಸೇವಿ 2001, ದಿನಾಂಕ 30-04-2003.
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಂವ್ಯಶಾಇ 06 ಶಾಸನ 2011, ದಿನಾಂಕ 04-05-2011.
4. ಸರ್ಕಾರದ ಆದೇಶ ಸಂಖ್ಯೆ : ಕಂಇ 79 ಮುಸೇವಿ 2011, ದಿನಾಂಕ 13-07-2011.
5. ರಾಜ್ಯ ಧಾರ್ಮಿಕ ಪರಿಷತ್ತಿನ ಸಭಾ ನಡವಳಿ ದಿನಾಂಕ 30-08-2011.
6. ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಎಡಿಎಂ 8 ಸಿಆರ್ 136/2011-12, ದಿನಾಂಕ 08-09-2011.

**ಪ್ರಸ್ತಾವನೆ :**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ವ್ಯವಸ್ಥಾಪನ ಮತ್ತು ಆಡಳಿತಕ್ಕೆ ಉತ್ತಮ ಉಪಬಂಧ ಕಲ್ಪಿಸಲು ಸರ್ಕಾರವು ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ನ್ನು ಪ್ರಕಟಿಸಿದೆ.

ಈ ಅಧಿನಿಯಮಕ್ಕೆ ಪೂರಕವಾಗಿ ಸರ್ಕಾರವು ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ನಿಯಮಗಳು, 2002ನ್ನು ರಚಿಸಲಾಗಿರುತ್ತದೆ. ಈ ನಿಯಮವು ಅಧಿಕೃತವಾಗಿ ದಿನಾಂಕ 01-05-2003 ರಂದು ಜಾರಿಗೆ ಬಂದಿರುತ್ತದೆ.

ಈ ಅಧಿನಿಯಮಕ್ಕೆ ಮತ್ತಷ್ಟು ತಿದ್ದುಪಡಿಯನ್ನು ತರಲು ಸರ್ಕಾರವು ನಿರ್ಧರಿಸಿ, ಮೇಲೆ (3) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ 2011 ನ್ನು ರಚಿಸಿದೆ. ಈ ತಿದ್ದುಪಡಿ ಅಧಿನಿಯಮವು ಅಧಿಕೃತವಾಗಿ ದಿನಾಂಕ 04-05-2011 ರಂದು ಜಾರಿಗೆ ಬಂದಿರುತ್ತದೆ.

ಈ ತಿದ್ದುಪಡಿ ಅಧಿನಿಯಮದ ಸೆಕ್ಷನ್-20ರಲ್ಲಿ ರಾಜ್ಯ ಧಾರ್ಮಿಕ ಪರಿಷತ್ತನ್ನು ರಚಿಸುವ ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಅದರನ್ವಯ, ಸರ್ಕಾರವು ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ಮಾನ್ಯ ಉನ್ನತ ಶಿಕ್ಷಣ, ಯೋಜನೆ, ಸಾಂಖ್ಯಿಕ, ಮುಜರಾಯಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವರ ಅಧ್ಯಕ್ಷತೆಯಲ್ಲಿ ಕರ್ನಾಟಕ ರಾಜ್ಯ ಧಾರ್ಮಿಕ ಪರಿಷತ್ತನ್ನು ರಚಿಸಲಾಗಿರುತ್ತದೆ.

ಪ್ರಸ್ತಾಪಿತ ತಿದ್ದುಪಡಿಯ ಅಧಿನಿಯಮ ಸೆಕ್ಷನ್–20ಎ ರಲ್ಲಿ ರಾಜ್ಯ ಧಾರ್ಮಿಕ ಪರಿಷತ್ತು ನಿರ್ವಹಿಸಬೇಕಾದ ಅಧಿಕಾರ ಮತ್ತು ಪ್ರಕಾರ್ಯಗಳನ್ನು ಗೊತ್ತುಪಡಿಸಲಾಗಿರುತ್ತದೆ.

ದಿನಾಂಕ 30–08–2011 ರಂದು ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯು, ಸದರಿ ಪರಿಷತ್ತಿನ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಭೆಯಲ್ಲಿ ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸುವ ಬಗ್ಗೆ ಸಮಾಲೋಚಿಸಲಾಯಿತು. ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ 2011ರ ಸೆಕ್ಷನ್–21ರ ಪ್ರಕಾರ, ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸಭೆಯಲ್ಲಿ ನಿರ್ಣಯವನ್ನು ಕೈಗೊಳ್ಳಲಾಯಿತು (ಉಲ್ಲೇಖ–ಮೇಲೆ (5)ರಲ್ಲಿ ಓದಲಾದ ಸಭಾ ನಡವಳಿ);

| ಕ್ರ. ಸಂ. | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1 | ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು | ಅಧ್ಯಕ್ಷರು |
| 2 | ಸಹಾಯಕ ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ | ಪದನಿಮಿತ್ತ ಕಾರ್ಯದರ್ಶಿಗಳು |
| 3 | ಶ್ರೀ ಎಂ. ಶ್ಯಾಮ ಭಟ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, 'ಚೇತನಾ ನಿಲಯ' ದೇರಲಕಟ್ಟೆ, ಮಂಗಳೂರು–575 018 | ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸದಸ್ಯರು |
| 4 | ಶ್ರೀ ನಾಗರಾಜ ಭಟ್, ಪುರೋಹಿತ, 'ಕೇಶವ ಕೃಪಾ' ವಿದ್ಯಾನಗರ, ಹಳ್ಳಿಗೇಟ್, ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | ಆಗಮ ಸದಸ್ಯರು |
| 5 | ಶ್ರೀ ಸೋಂದ ಭಾಸ್ಕರ್ ಭಟ್, 'ಈಶಾವಾಸ್ಯಂ' ಅಜಾರು, ಕಟೀಲು ಅಂಚೆ, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | ವೇದ ಸದಸ್ಯರು |
| 6 | ಶ್ರೀ ಕೃಷ್ಣಪ್ಪ ದೇರೆಬೈಲು, ಹೋಲಿ ಫ್ಯಾಮಿಲಿ, ಹಿರಿಯ ಪ್ರಾಥಮಿಕ ಶಾಲೆ ಎದುರು, ದೇರೆಬೈಲು, ಮಂಗಳೂರು–575006 | ಪರಿಶಿಷ್ಟ ಜಾತಿ/ವರ್ಗ ಸದಸ್ಯರು |
| 7 | ಶ್ರೀಮತಿ ಆಶಾ ಪ್ರಸಾದ್ ಕೋಂ ಪ್ರಸಾದ್ ಕುಮಾರ್ ಜಿ., ಮನುಶ್ರೀ ಅಜ್ಜಿಬೆಟ್ಟು, ಜೋಡುಮಾರ್ಗ ಅಂಚೆ, ಬಂಟ್ವಾಳ ತಾಲ್ಲೂಕು | ಮಹಿಳಾ ಸದಸ್ಯರು |
| 8 | ಶ್ರೀ ಕೆ.ಟಿ. ಸುವರ್ಣ, ಬಿನ್ ದಿ: ಕೆ. ಶಿವಪ್ಪ ಪೂಜಾರಿ, 'ಅನ್ನಪೂರ್ಣೇಶ್ವರಿ ಕೃಪಾ' ಎ.ಆರ್.ಸಿ. ರಸ್ತೆ, ತೊಕ್ಕೊಟ್ಟು, ಉಳ್ಳಾಲ ಅಂಚೆ, ಮಂಗಳೂರು | ಹಿಂದುಳಿದ ವರ್ಗ ಸದಸ್ಯರು |
| 9 | ಶ್ರೀ ನನ್ಯ ಅಚ್ಚುತ್ತ ಮೂಡಿತ್ತಾಯ, 'ಅನನ್ಯ' ಮುಡ್ನೂರು ಗ್ರಾಮ, ಅಂಚೆ ಕಾವು, ಪುತ್ತೂರು ತಾಲ್ಲೂಕು | ಸಾಮಾನ್ಯ ಸದಸ್ಯರು |
| 10 | ಶ್ರೀ ಎಂ. ವಿಶ್ವನಾಥ ಆಚಾರ್, 'ಶಿವಾನುಗ್ರಹ' ಕದ್ರಿ ದೇವಸ್ಥಾನ ರಸ್ತೆ, ಮಂಗಳೂರು–575904 | ಸಾಮಾನ್ಯ ಸದಸ್ಯರು |

ಈ ನಿರ್ಣಯವನ್ನು ಅನುಸರಿಸಿ, ಆಯುಕ್ತರು, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ, ಬೆಂಗಳೂರು ಇವರು ಮೇಲೆ (6) ರಲ್ಲಿ ಓದಲಾದ ಪತ್ರದಲ್ಲಿ, ದಿನಾಂಕ 30–08–2011 ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ, ತಿದ್ದುಪಡಿ ಅಧಿನಿಯಮದ ಸೆಕ್ಷನ್–21ರನ್ವಯ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸಬೇಕೆಂದು ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 131 ಮುಸೇವಿ 2011, ಬೆಂಗಳೂರು, ದಿನಾಂಕ 20ನೇ ಸೆಪ್ಟೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ಸಂಸ್ಥೆಗಳ (ತಿದ್ದುಪಡಿ) ಅಧಿನಿಯಮ 2011ರ ಸೆಕ್ಷನ್–21ರನ್ವಯ ಈ ಕೆಳಕಂಡಂತೆ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿ ಸರ್ಕಾರವು ಆದೇಶಿಸಿದೆ :–

| ಕ್ರ. ಸಂ. | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1 | ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು | ಅಧ್ಯಕ್ಷರು |
| 2 | ಶ್ರೀ ಎಂ. ಶ್ಯಾಮ ಭಟ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, 'ಚೇತನಾ ನಿಲಯ' ದೇರಲಕಟ್ಟೆ, ಮಂಗಳೂರು–575 018 | ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸದಸ್ಯರು |
| 3 | ಶ್ರೀ ನಾಗರಾಜ ಭಟ್, ಪುರೋಹಿತ, 'ಕೇಶವ ಕೃಪಾ' ವಿದ್ಯಾನಗರ, ಹಳ್ಳಿಗೇಟ್, ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | ಆಗಮ ಸದಸ್ಯರು |
| 4 | ಶ್ರೀ ಸೋಂದ ಭಾಸ್ಕರ್ ಭಟ್, 'ಈಶಾವಾಸ್ಯಂ' ಅಜಾರು, ಕಟೀಲು ಅಂಚೆ, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | ವೇದ ಸದಸ್ಯರು |
| 5 | ಶ್ರೀ ಕೃಷ್ಣಪ್ಪ ದೇರೆಬೈಲು, ಹೋಲಿ ಫ್ಯಾಮಿಲಿ, ಹಿರಿಯ ಪ್ರಾಥಮಿಕ ಶಾಲೆ ಎದುರು, ದೇರೆಬೈಲು, ಮಂಗಳೂರು–575006 | ಪರಿಶಿಷ್ಟ ಜಾತಿ/ವರ್ಗ ಸದಸ್ಯರು |
| 6 | ಶ್ರೀಮತಿ ಆಶಾ ಪ್ರಸಾದ್ ಕೋಂ ಪ್ರಸಾದ್ ಕುಮಾರ್ ಜಿ., ಮನುಶ್ರೀ ಅಜ್ಜಿಬೆಟ್ಟು, ಜೋಡುಮಾರ್ಗ ಅಂಚೆ, ಬಂಟ್ವಾಳ ತಾಲ್ಲೂಕು | ಮಹಿಳಾ ಸದಸ್ಯರು |

| | | |
|---|---|---|
| 7 | ಶ್ರೀ ಕೆ.ಟಿ. ಸುವರ್ಣ, ಬಿನ್ ದಿ: ಕೆ. ಶಿವಪ್ಪ ಪೂಜಾರಿ, 'ಅನ್ನಪೂರ್ಣೇಶ್ವರಿ ಕೃಪಾ' ಎ.ಆರ್.ಸಿ. ರಸ್ತೆ, ತೊಕ್ಕೊಟ್ಟು, ಉಳ್ಳಾಲ ಅಂಚೆ, ಮಂಗಳೂರು | ಹಿಂದುಳಿದ ವರ್ಗ ಸದಸ್ಯರು |
| 8 | ಶ್ರೀ ನನ್ಯ ಅಚ್ಚುತ್ತ ಮೂಡಿತ್ತಾಯ, 'ಅನನ್ಯ' ಮುಡ್ನೂರು ಗ್ರಾಮ, ಅಂಚೆ ಕಾವು, ಪುತ್ತೂರು ತಾಲ್ಲೂಕು | ಸಾಮಾನ್ಯ ಸದಸ್ಯರು |
| 9 | ಶ್ರೀ ಎಂ. ವಿಶ್ವನಾಥ ಆಚಾರ್, 'ಶಿವಾನುಗ್ರಹ' ಕದ್ರಿ ದೇವಸ್ಥಾನ ರಸ್ತೆ, ಮಂಗಳೂರು–575904 | ಸಾಮಾನ್ಯ ಸದಸ್ಯರು |
| 10 | ಸಹಾಯಕ ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ | ಪದನಿಮಿತ್ತ ಕಾರ್ಯದರ್ಶಿಗಳು |

ಈ ಆದೇಶದಲ್ಲಿ ರಚಿಸಲ್ಪಟ್ಟ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಧಾರ್ಮಿಕ ಪರಿಷತ್ತಿನ ಅವಧಿಯು ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ; ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಅಸ್ತಿತ್ವದಲ್ಲಿರುತ್ತದೆ.

ಈ ಪರಿಷತ್ತು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ 2011ರ ಸೆಕ್ಷನ್–21ಎ ರಲ್ಲಿ ವಿಹಿತಗೊಳಿಸಿರುವ ಕರ್ತವ್ಯ ಮತ್ತು ಪ್ರಕಾರ್ಯಗಳನ್ನು ನಿರ್ವಹಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಉಮಾಪತಿ,**

ಸರ್ಕಾರದ ಅಧೀನ ಕಾರ್ಯದರ್ಶಿ ,

ಪಿ.ಆರ್.ನಂ. 2443 ಕಂದಾಯ ಇಲಾಖೆ (ಮುಜರಾಯಿ).

## ಕಂದಾಯ ಸಚಿವಾಲಯ

**ವಿಷಯ :** ಸರ್ಕಾರಿ ಜಮೀನುಗಳ ಸಂರಕ್ಷಣಾ ಕಾರ್ಯಪಡೆ ವರದಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ 20–07–2011ರ ನಡವಳಿ.

**ಪ್ರಸ್ತಾವನೆ :**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು ಸರ್ಕಾರಿ ಜಮೀನಿನ ರಕ್ಷಣೆ ಬಗ್ಗೆ ಟಾಸ್ಕ್ ಫೋರ್ಸ್ ಮಾಡಿರುವ ಶಿಫಾರಸ್ಸುಗಳನ್ನು ಪರಿಗಣಿಸಿ, ಅದರ ಶಿಫಾರಸ್ಸುಗಳಂತೆ ಸರ್ಕಾರಿ ಜಮೀನಿನ ಅತಿಕ್ರಮಣವನ್ನು ತೆರವುಗೊಳಿಸಿ, ಸರ್ಕಾರಿ ಜಮೀನನ್ನು ರಕ್ಷಣೆ ಮಾಡುವ ಸಂಬಂಧವಾಗಿ ಸಲಹೆ ಸೂಚನೆ ನೀಡುವ ಸಲುವಾಗಿ ಸಂಬಂಧಪಟ್ಟ ಅಧಿಕಾರಿಗಳೊಂದಿಗೆ ದಿನಾಂಕ 20–07–2011 ರಂದು ಒಂದು ಸಭೆಯನ್ನು ನಡೆಸಿದ್ದರು. ಸದರಿ ಸಭೆಯಲ್ಲಿ ಈ ಕೆಳಕಂಡ ಅಂಶಗಳು ಚರ್ಚೆಗೆ ಬಂದಿರುತ್ತವೆ.

(ಎ) ಸಾರ್ವಜನಿಕ ಜಮೀನುಗಳ ಒತ್ತುವರಿಯನ್ನು ಗುರುತಿಸುವುದು.

(ಬಿ) ಸಾರ್ವಜನಿಕ ಜಮೀನು ಒತ್ತುವರಿಯನ್ನು ತೆರವುಗೊಳಿಸುವುದಕ್ಕೆ ಕ್ರಮ ತೆಗೆದುಕೊಳ್ಳುವುದು.

(ಸಿ) ಸಾರ್ವಜನಿಕ ಜಮೀನನ್ನು ರಕ್ಷಿಸಲು ಕ್ರಮ ತೆಗೆದುಕೊಳ್ಳುವುದು.

(ಡಿ) ಕೆರೆ ಒತ್ತುವರಿಯನ್ನು ತೆರವುಗೊಳಿಸುವುದು ಮತ್ತು ರಕ್ಷಿಸುವುದಕ್ಕೆ ವಿಶೇಷ ಕಾರ್ಯಕ್ರಮ ಹಮ್ಮಿಕೊಳ್ಳುವುದು.

(ಇ) ನಗರ ಪ್ರದೇಶದ ಜಮೀನು ಅಳತೆ ಮಾಡುವುದು.

(2) ಮುಂದುವರೆದು, ಸದರಿ ಸಭೆಯಲ್ಲಿ ಚರ್ಚಿಸಿದಂತೆ ಸರ್ಕಾರಿ ಜಮೀನು ಒತ್ತುವರಿ ತೆರವುಗೊಳಿಸುವುದು ಮತ್ತು ಸಂರಕ್ಷಿಸುವ ಉದ್ದೇಶಕ್ಕಾಗಿ ಈ ಕೆಳಕಂಡ ಇಲಾಖೆಗಳ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ ರವರ ಅಧ್ಯಕ್ಷತೆಯಲ್ಲಿ ಸಮಿತಿಗಳನ್ನು ರಚಿಸಲು ತೀರ್ಮಾನಿಸಲಾಗಿರುತ್ತದೆ.

**(ಎ) ಕಂದಾಯ ಇಲಾಖೆ**

ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ – ಅಧ್ಯಕ್ಷರು

ಆಯುಕ್ತರು, ಭೂ ದಾಖಲೆಗಳು ಮತ್ತು ಭೂ ಮಾಪನ ಇಲಾಖೆ – ಸದಸ್ಯರು

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು – ಸದಸ್ಯರು

ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು – ಸದಸ್ಯ ಸಮನ್ವಯಾಧಿಕಾರಿ

**(ಬಿ) ಅರಣ್ಯ ಇಲಾಖೆ**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ – ಅಧ್ಯಕ್ಷರು

ಸರ್ಕಾರದ ಕಾರ್ಯದರ್ಶಿ, ಅರಣ್ಯ ಇಲಾಖೆ – ಸದಸ್ಯರು

ಸರ್ಕಾರದ ಕಾರ್ಯದರ್ಶಿ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ – ಸದಸ್ಯರು

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಹೆಚ್.ಓ.ಎಫ್.ಎಫ್) – ಸದಸ್ಯರು

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ವೈಲ್ಡ್ ಲೈಫ್) – ಸದಸ್ಯರು

ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಲ್ಯಾಂಡ್ ರೆಕಾರ್ಡ್ಸ್) – ಸದಸ್ಯ ಸಮನ್ವಯಾಧಿಕಾರಿ

**(ಸಿ) ನಗರಾಭಿವೃದ್ಧಿ ಇಲಾಖೆ**

ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ – ಅಧ್ಯಕ್ಷರು

ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ – ಸದಸ್ಯರು

ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ – ಸದಸ್ಯರು

ಉಪ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ – ಸದಸ್ಯ ಸಮನ್ವಯಾಧಿಕಾರಿ

(3) ಸದರಿ ಸಲಹೆಯಂತೆ 3 ಸಮಿತಿಗಳನ್ನು ರಚಿಸಿ, ಸದರಿ ಸಮಿತಿಗಳು ಸರ್ಕಾರಿ ಜಮೀನಿನ ಅತಿಕ್ರಮಣವನ್ನು ತಡೆಯುವ, ಸರ್ಕಾರಿ ಜಮೀನಿನ ಸಂರಕ್ಷಣೆ ಮಾಡುವ ಬಗ್ಗೆ ಪರಾಮರ್ಶಿಸಿ ಮುಂದಿನ ಒಂದು ತಿಂಗಳೊಳಗಾಗಿ ಸೂಕ್ತ ಸಲಹೆ/ಸೂಚನೆ ನೀಡುವಂತೆ ನಿರ್ದೇಶನ ನೀಡಲು ತೀರ್ಮಾನಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 188 ಎಲ್‌ಜಿಪಿ 2011, ಬೆಂಗಳೂರು, ದಿನಾಂಕ 19ನೇ ಸೆಪ್ಟೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ಜಮೀನುಗಳ ರಕ್ಷಣೆ ಮಾಡುವ ಬಗ್ಗೆ ಪರಾಮರ್ಶಿಸಿ ಸೂಕ್ತ ಸಲಹೆ ನೀಡಲು ಈ ಕೆಳಕಂಡಂತೆ ಸಮಿತಿಗಳನ್ನು ರಚಿಸಲಾಗಿದೆ.

(ಎ) **ಕಂದಾಯ ಇಲಾಖೆ**

| | | |
|---|---|---|
| ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ | – | ಅಧ್ಯಕ್ಷರು |
| ಆಯುಕ್ತರು, ಭೂ ದಾಖಲೆಗಳು ಮತ್ತು ಭೂ ಮಾಪನ ಇಲಾಖೆ | – | ಸದಸ್ಯರು |
| ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು | – | ಸದಸ್ಯರು |
| ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು | – | ಸದಸ್ಯ ಸಮನ್ವಯಾಧಿಕಾರಿ |

(ಬಿ) **ಅರಣ್ಯ ಇಲಾಖೆ**

| | | |
|---|---|---|
| ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | – | ಅಧ್ಯಕ್ಷರು |
| ಸರ್ಕಾರದ ಕಾರ್ಯದರ್ಶಿ, ಅರಣ್ಯ ಇಲಾಖೆ | – | ಸದಸ್ಯರು |
| ಸರ್ಕಾರದ ಕಾರ್ಯದರ್ಶಿ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | – | ಸದಸ್ಯರು |
| ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಹೆಚ್.ಓ.ಎಫ್.ಎಫ್) | – | ಸದಸ್ಯರು |
| ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ವೈಲ್ಡ್ ಲೈಫ್) | – | ಸದಸ್ಯರು |
| ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಲ್ಯಾಂಡ್ ರೆಕಾರ್ಡ್ಸ್) | – | ಸದಸ್ಯ ಸಮನ್ವಯಾಧಿಕಾರಿ |

(ಸಿ) **ನಗರಾಭಿವೃದ್ಧಿ ಇಲಾಖೆ**

| | | |
|---|---|---|
| ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | – | ಅಧ್ಯಕ್ಷರು |
| ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | – | ಸದಸ್ಯರು |
| ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | – | ಸದಸ್ಯರು |
| ಉಪ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | – | ಸದಸ್ಯ ಸಮನ್ವಯಾಧಿಕಾರಿ |

ಸದರಿ ಸಮಿತಿಗಳು ಈ ಕೆಳಕಂಡಂತೆ ಕಾರ್ಯನಿರ್ವಹಿಸಬೇಕಾಗುತ್ತದೆ.

a) **Curative action** : The departments sub-sommittees named should examine individual instances of encroachment and land grabbing from all available sources, scrutinize the same and take remedial action on a war footing.

b) **Preventive action** : Each Sub-Committee must identify preventive action. The Revenue Department should pursue (a) promulgamation of the Land Grabbing Bill, so that further encroachments could be effectively prevented, (b) strengthening of the KPLC by merging the Enforcement Cell and the STF which is now in the establishment of the Bangalore urban DC into KPLC (c) expedite City Surveys in Bangalore and other urban areas.

c) **Disciplinary action** : The three Committees should fix responsibilities on the perpetrators involved in land grabbing and encroachments alike, both non-official and officials who have abetted such encroachments and take the matter to its logical end by initiating disciplinary action.

ಸದರಿ ಸಮಿತಿಗಳು ಸರ್ಕಾರಿ ಜಮೀನುಗಳ ಅತಿಕ್ರಮಣವನ್ನು ತಡೆಯುವ, ಸರ್ಕಾರಿ ಜಮೀನುಗಳನ್ನು ಸಂರಕ್ಷಣೆ ಮಾಡುವ ಬಗ್ಗೆ ಪರಾಮರ್ಶಿಸಿ ಮುಂದಿನ ಒಂದು ತಿಂಗಳೊಳಗಾಗಿ ಸೂಕ್ತ ಸಲಹೆ/ಸೂಚನೆ ನೀಡುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ. ರಾಮಸ್ವಾಮಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ.).

ಪಿ.ಆರ್.ನಂ. 2444

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಬೆಂಗಳೂರು ಐ.ಟಿ.ಬಿಜ್ – 2011ರ ಕಾರ್ಯಕ್ರಮದ ಅಂಗವಾಗಿ ಏರ್ಪಡಿಸಲಾಗಿರುವ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಉನ್ನತೀಕರಣ ಚಟುವಟಿಕೆಗಳಿಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಬೆಂಗಳೂರು ಇವರ ಪತ್ರ ಸಂಖ್ಯೆ: ಮಾತಂನಿ/ಲೆಕ್ಕ–483/2011–12 ದಿನಾಂಕ: 19–09–2011.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರ ದಿನಾಂಕ: 19–09–2011ರಲ್ಲಿ ಮಾತಂ ಜೈತಂ ಹಾಗೂ ವಿತಂ ಇಲಾಖೆಯು ಪ್ರತಿ ವರ್ಷದಂತೆ ಬೆಂಗಳೂರು ಐಟಿ ಬಿಜ್ 2011 ಮೇಳವನ್ನು ಪ್ರತಿ ವರ್ಷದಂತೆ ಈ ವರ್ಷವೂ

ಏರ್ಪಡಿಸುತ್ತಿರುವ ಕಾರಣ 'ಬೆಂಗಳೂರು ಐ.ಟಿ.ಬಿಜ್ – 2011' ಮೇಳದ ಅಂಗವಾಗಿ ಹಮ್ಮಿಕೊಂಡಿರುವ ಈ ಕೆಳಕಂಡ ಪ್ರಾಯೋಜನಾ ಕಾರ್ಯಕ್ರಮಗಳಿಗೆ ಒಟ್ಟು ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

| ಕ್ರ.ಸಂ. | ಕಾರ್ಯಕ್ರಮದ ವಿವರ | ಅಂದಾಜು ವೆಚ್ಚ (ರೂ. ಲಕ್ಷಗಳಲ್ಲಿ) |
|---|---|---|
| 1 | ಬೆಂಗಳೂರು ಐಟಿ ಬಿಜ್–2011 ಮೇಳದ ಪ್ರಾಯೋಜನಾ (ಇಲಾಖಾ ಮಳಿಗೆ ನಿವೇಶನದ ಬಾಡಿಗೆ ಸೇರಿ) ಕಳೆದ ವರ್ಷ ರೂ. 45.00 ಲಕ್ಷ ಪ್ರಾಯೋಜನಾ ಹಣ ಬಿಡುಗಡೆ ಮಾಡಿರುವ ಹಿನ್ನೆಲೆಯಲ್ಲಿ ಪ್ರಸಕ್ತ ಸಾಲಿಗೆ ರೂ. 45.00 ಲಕ್ಷಗಳ ಬಿಡುಗಡೆ) | 45.00 |
| 2 | Student Internet world ಮತ್ತು ಐಟಿ ಕ್ವಿಜ್ ಕಾರ್ಯಕ್ರಮದ ಖರ್ಚು | 30.00 |
| 3 | ಉದ್ಘಾಟನಾ ಸಮಾರಂಭದ ಜಾಹೀರಾತು, ಇಲಾಖಾ ಮಳಿಗೆ ಸ್ಥಾಪನೆ ಪೂರ್ವಭಾವಿ ವೆಚ್ಚ ಇತ್ಯಾದಿ ವೆಚ್ಚಗಳು | 25.00 |
| | **ಒಟ್ಟು** | **100.00** |

2011–12ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ – 059 – ಇತರೆ ಖರ್ಚು (ಯೋಜನೆ)" ಇದರಡಿಯಲ್ಲಿ ಒದಗಿಸಲಾದ ರೂ. 100.00 ಲಕ್ಷಗಳಲ್ಲಿ ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಹಾಗೂ ಅಭಿವೃದ್ಧಿ ಚಟುವಟಿಕೆಗಳಿಗಾಗಿ ರೂ. 264.15 ಹಂಚಿಕೆ ಮಾಡಲಾಗಿದ್ದು, ಅದರಲ್ಲಿ ಈಗಾಗಲೇ ರೂ. 150.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಉಳಿದ ರೂ. 114.15 ಲಕ್ಷಗಳಲ್ಲಿ ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡಬಹುದಾಗಿದೆ.

ಅದರನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 49 ಎಡಿಎಂ 2011, ಬೆಂಗಳೂರು, ದಿನಾಂಕ : 29–09–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು 'ಬೆಂಗಳೂರು ಐ.ಟಿ. ಬಿಜ್ – 2011'ರ ಮೇಳದ ಅಂಗವಾಗಿ ಹಮ್ಮಿಕೊಂಡಿರುವ ಈ ಕೆಳಕಂಡ ಪ್ರಾಯೋಜನಾ ಕಾರ್ಯಕ್ರಮಕ್ಕಾಗಿ ಒಟ್ಟು ರೂ. 100.00 ಲಕ್ಷಗಳನ್ನು (ನೂರು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ – ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ.ಸಂ. | ಕಾರ್ಯಕ್ರಮದ ವಿವರ | ಅಂದಾಜು ವೆಚ್ಚ (ರೂ. ಲಕ್ಷಗಳಲ್ಲಿ) |
|---|---|---|
| 1 | ಬೆಂಗಳೂರು ಐಟಿ ಬಿಜ್–2011 ಮೇಳದ ಪ್ರಾಯೋಜನಾ (ಇಲಾಖಾ ಮಳಿಗೆ ನಿವೇಶನದ ಬಾಡಿಗೆ ಸೇರಿ) ಕಳೆದ ವರ್ಷ ರೂ. 45.00 ಲಕ್ಷ ಪ್ರಾಯೋಜನಾ ಹಣ ಬಿಡುಗಡೆ ಮಾಡಿರುವ ಹಿನ್ನೆಲೆಯಲ್ಲಿ ಪ್ರಸಕ್ತ ಸಾಲಿಗೆ ರೂ. 45.00 ಲಕ್ಷಗಳ ಬಿಡುಗಡೆ) | 45.00 |
| 2 | Student Internet world ಮತ್ತು ಐಟಿ ಕ್ವಿಜ್ ಕಾರ್ಯಕ್ರಮದ ಖರ್ಚು | 30.00 |
| 3 | ಉದ್ಘಾಟನಾ ಸಮಾರಂಭದ ಜಾಹೀರಾತು, ಇಲಾಖಾ ಮಳಿಗೆ ಸ್ಥಾಪನೆ ಪೂರ್ವಭಾವಿ ವೆಚ್ಚ ಇತ್ಯಾದಿ ವೆಚ್ಚಗಳು | 25.00 |
| | **ಒಟ್ಟು** | **100.00** |

ಈ ವೆಚ್ಚವನ್ನು 2011–2012ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ – 059 – ಇತರೆ ಖರ್ಚು (ಯೋಜನೆ)"** ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಬೆಂಗಳೂರು ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಬೆಂಗಳೂರು ಇವರ ಮೇಲು ಸಹಿ ಪಡೆದು ಖಜಾನೆಯಿಂದ ಡ್ರಾ ಮಾಡಿ ಕೆಬಿಟ್ಸ್ ಸಂಸ್ಥೆಗೆ ವಿತರಿಸತಕ್ಕದ್ದು. ಈ ಅನುದಾನದ ಉಪಯೋಗಿತಾ ದೃಢೀಕರಣ ಪತ್ರಗಳನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2445

**ಇ. ರಾಮಕೃಷ್ಣಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಆನಂದ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇದರ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಒ 41 ಸಿಎಲ್ಎಂ 2011, ದಿನಾಂಕ: 09.03.2011.

2. ಅಧ್ಯಕ್ಷರು, ಕರ್ನಾಟಕ ಆನಂದ ಗೃಹ ಸಹಕಾರ ಸಂಘ ನಿಯಮಿತ, ಮೈಸೂರು ಇವರ ಮನವಿ.

**ಪ್ರಸ್ತಾವನೆ:**

ಆನಂದ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇದರ ಆಡಳಿತ ಸಮಿತಿಗೆ ದಿನಾಂಕ: 31.03.2011ರೊಳಗೆ ನಡೆಸಬೇಕಾಗಿದ್ದ ಚುನಾವಣೆಯನ್ನು ದಿನಾಂಕ: 30.09.2011ರವರೆಗೆ ವಿಸ್ತರಿಸಿ ಓದಲಾದ (1)ರ ಆದೇಶದಲ್ಲಿ ಅನುಮತಿ ನೀಡಲಾಗಿದೆ. ಮೇಲೆ ಓದಲಾದ (2)ರಲ್ಲಿ ಸಂಘದ ವತಿಯಿಂದ ನಿವೇಶನಗಳ ರಚನೆ ಕಾರ್ಯ ಸಂಪೂರ್ಣವಾಗಿರುವುದಿಲ್ಲ. ಕಾರಣ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಸಾಕಷ್ಟು ಕಾಮಗಾರಿ ಆಗಿರುವುದಿಲ್ಲ. ಕಾಮಗಾರಿಗಳ ಕೆಲಸ ಬಹುತೇಕ ಪೂರ್ಣಗೊಳ್ಳುವ ಹಂತ ತಲುಪಿದ್ದು ಅರ್ಹ ಸದಸ್ಯರಿಗೆ ನಿವೇಶನ ಹಂಚಿಕೆ ಪ್ರಕ್ರಿಯೆ ಪ್ರಗತಿಯಲ್ಲಿದೆ. ಈ ಎಲ್ಲಾ ಪ್ರಕ್ರಿಯೆಗಳನ್ನು ಮುಗಿಸಲು ಕನಿಷ್ಠ ಆರು ತಿಂಗಳ ಕಾಲಾವಕಾಶ ಬೇಕಾಗಿರುತ್ತದೆ. ದಿನಾಂಕ: 31.07.2011ರಂದು ನಡೆದ ಆಡಳಿತ ಮಂಡಳಿ ಸಭೆಯಲ್ಲಿ ಕನಿಷ್ಠ 6 ತಿಂಗಳ ಅವಧಿಗೆ ಸಂಘದ ಆಡಳಿತ ಮಂಡಳಿ ಚುನಾವಣೆಯನ್ನು ಮುಂದೂಡಲು ನಿರ್ಣಯ ಮಾಡಲಾಗಿದೆ. ಆದುದರಿಂದ, ಆರು ತಿಂಗಳು ಅಂದರೆ ದಿನಾಂಕ: 31.03.2012ರೊಳಗಾಗಿ ಚುನಾವಣೆಯನ್ನು ನಡೆಸಲು ಅವಕಾಶ ನೀಡಬೇಕಾಗಿ ಕೋರಿರುತ್ತಾರೆ ಹಾಗೂ ಈಗಾಗಲೇ 2009–10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31.03.2012ರೊಳಗಾಗಿ ಒಟ್ಟಿಗೆ ನಡೆಸಲು ಅನುವಾಗುವಂತೆ ಪ್ರಸ್ತುತ ಆಡಳಿತ ಮಂಡಳಿ ಅವಧಿಯನ್ನು ವಿಸ್ತರಿಸಿ ಕೊಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 161 ಸಿಎಲ್ಎಂ 2011, ದಿನಾಂಕ : 15–09–2011**

ಮೇಲಿನ ಪರಿಸ್ಥಿತಿಯಲ್ಲಿ, ಆನಂದ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5) 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಸದರಿ ಸಂಘಕ್ಕೆ ಸಾರ್ವಜನಿಕ ಹಿತದೃಷ್ಟಿಯಿಂದ ಚುನಾವಣೆಯನ್ನು ದಿನಾಂಕ: 31.03.2012ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ:**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31.03.2012ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಉಪ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 2446

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದ ನೇಕಾರರಿಗೆ ಸಹಕಾರ ಸಂಘಗಳು/ಸಹಕಾರ ಬ್ಯಾಂಕುಗಳು ಶೇಕಡಾ 3ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ 2011–12ನೇ ಸಾಲಿಗೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಒ 156 ಸಿಎಲ್ಎಸ್ 2011, ದಿನಾಂಕ: 07.06.2011.

2. ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 384 ವೆಚ್ಚ 2/2011, ದಿನಾಂಕ: 20.09.2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ 2011–12ನೇ ಸಾಲಿಗೆ ನೇಕಾರರ ಸಹಕಾರ ಸಂಘಗಳು/ಪತ್ತಿನ ಸಹಕಾರ ಸಂಘಗಳು/ಸಹಕಾರ ಬ್ಯಾಂಕುಗಳು/ಕೃಷಿಯೇತರ ಪತ್ತಿನ ಸಹಕಾರ ಸಂಘಗಳು ರಾಜ್ಯದ ನೇಕಾರರಿಗೆ ನೇಕಾರಿಕೆ ಉದ್ದೇಶಗಳಿಗಾಗಿ ಶೇಕಡಾ 3ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ರೂ. 3.00 ಲಕ್ಷಗಳ ಮಿತಿಗಳಿಗೊಳಪಟ್ಟು ಒದಗಿಸಲು ಮಂಜೂರಾತಿ ನೀಡಲಾಗಿರುತ್ತದೆ. ಈ ವಿಷಯದಲ್ಲಿ ಅನೇಕ ಜನಪ್ರತಿನಿಧಿಗಳು ರೂ. 3.00 ಲಕ್ಷಗಳ ಸಾಲದ ಮಿತಿಯನ್ನು ತೆಗೆದುಹಾಕಲು ವಿನಂತಿಸಿರುತ್ತಾರೆ. ಈ ವಿಷಯವನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ ಆರ್ಥಿಕ ಇಲಾಖೆಯ ಓದಲಾದ (2)ರಲ್ಲಿ ಈ ಕೆಳಕಂಡ ಅಂಶಗಳನ್ನು ಅನುಮೋದನೆ ನೀಡಲಾಗಿದೆಯೆಂದು ತಿಳಿಸಿರುತ್ತಾರೆ.

1. ನಬಾರ್ಡ್ ಸಂಸ್ಥೆಯು ಶೇಕಡಾ 8.5 ಬಡ್ಡಿ ದರದಲ್ಲಿ ನೀಡುತ್ತಿರುವ ರೀಫೈನಾನ್ಸ್ ಸೌಲಭ್ಯವನ್ನು ಗರಿಷ್ಠ ಮಟ್ಟದಲ್ಲಿ ಉಪಯೋಗಿಸಿಕೊಳ್ಳುವುದು.
2. ಶೇಕಡಾ 9ರ ಬಡ್ಡಿ ಸಹಾಯಧನವನ್ನು ಹಾಗೆಯೇ ಉಳಿಸಿಕೊಳ್ಳುವುದು.
3. ಪ್ರತಿ ಸಾಲಗಾರನಿಗೆ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲದ ಮಿತಿಯನ್ನು ರೂ. 5.00 ಲಕ್ಷಗಳಿಗೆ ಹೆಚ್ಚಿಸುವುದು.

ಆದುದರಿಂದ ಓದಲಾದ (1)ರಲ್ಲಿ ಆದೇಶವನ್ನು ಮಾರ್ಪಡಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 156 ಸಿಎಲ್ಎಸ್ 2011, ಬೆಂಗಳೂರು, ದಿನಾಂಕ : 26–09–2011**

ಮೇಲೆ ವಿವರಿಸಲಾದ ಪರಿಸ್ಥಿತಿಯಲ್ಲಿ ಓದಲಾದ ಸರ್ಕಾರದ ಆದೇಶ (1) ಅನ್ನು ಮಾರ್ಪಡಿಸಿ ನೇಕಾರರ ಸಹಕಾರ ಸಂಘಗಳು/ಪತ್ತಿನ ಸಹಕಾರ ಸಂಘಗಳು/ಸಹಕಾರ ಬ್ಯಾಂಕುಗಳು/ಕೃಷಿಯೇತರ ಪತ್ತಿನ ಸಹಕಾರ ಸಂಘಗಳು ರಾಜ್ಯದ ನೇಕಾರರಿಗೆ ನೀಡುವ ಅಲ್ಪಾವಧಿ ಸಾಲಗಳಿಗೆ ರೂ. 3.00 ಲಕ್ಷ ಹಾಗೂ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳಿಗೆ ರೂ. 5.00 ಲಕ್ಷಗಳವರೆಗಿನ ಮಿತಿಗೊಳಪಟ್ಟು ನೇಕಾರಿಕೆ ಉದ್ದೇಶಗಳಿಗಾಗಿ ಶೇಕಡಾ 3ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ನೀಡಲು ಮಂಜೂರಾತಿ ನೀಡಲಾಗಿದೆ.

ಉಳಿದಂತೆ ಸದರಿ ಆದೇಶದಲ್ಲಿ "ರೂ. 3.00 ಲಕ್ಷಗಳು ಅಂತಾ ಇದ್ದ ಸ್ಥಳದಲ್ಲಿ ಅಲ್ಪಾವಧಿ ಸಾಲಗಳಿಗೆ ರೂ. 3.00 ಲಕ್ಷ ಹಾಗೂ ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲಗಳಿಗೆ ರೂ. 5.00 ಲಕ್ಷ" ಎಂದು ಓದಿಕೊಳ್ಳತಕ್ಕದ್ದು.

ಸದರಿ ಆದೇಶದಲ್ಲಿನ ಉಳಿದ ಎಲ್ಲಾ ಷರತ್ತುಗಳು ಈಗಿರುವಂತೆಯೇ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2447

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಸೃಜಿಸಲಾಗಿರುವ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪರಿಸರ ಮತ್ತು ಅರಣ್ಯ) ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 101 ಪಿಪಿಸಿ 2009, ದಿನಾಂಕ: 08–04–2010.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 72 ಪಿಪಿಸಿ 2010, ದಿನಾಂಕ: 01–10–2010.
3. ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಇವರ ಪತ್ರ ಸಂಖ್ಯೆ: ಎ1ಪಿ1ಬಿ/2686 ದಿನಾಂಕ: 09–08–2011.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಒಂದು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪರಿಸರ ಮತ್ತು ಅರಣ್ಯ) ಹುದ್ದೆಯನ್ನು ದಿನಾಂಕ: 25–09–2009 ರಿಂದ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ತಾತ್ಕಾಲಿಕವಾಗಿ ಮೇಲ್ಕಂಡ ಆದೇಶದಲ್ಲಿ ಸೃಜಿಸಲಾಗಿದ್ದ ಒಂದು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪರಿಸರ ಮತ್ತು ಅರಣ್ಯ) ಹುದ್ದೆಯನ್ನು ದಿನಾಂಕ: 25–09–2010 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇವರು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪರಿಸರ ಮತ್ತು ಅರಣ್ಯ) ಹುದ್ದೆಯ ಕಾಲಾವಧಿಯು ದಿನಾಂಕ: 24–09–2011 ರಂದು ಮುಕ್ತಾಯಗೊಳ್ಳುತ್ತಿರುವುದರಿಂದ ಈ ಹುದ್ದೆಯನ್ನು ಮುಂದಿನ ಎರಡು ವರುಷಗಳ ಅವಧಿಗೆ ಮುಂದುವರಿಸಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 88 ಪಿಪಿಸಿ 2011 ಬೆಂಗಳೂರು, ದಿನಾಂಕ: 20–09–2011**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪರಿಸರ ಮತ್ತು ಅರಣ್ಯ) ಹುದ್ದೆಯನ್ನು ದಿನಾಂಕ: 25–09–2011 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ದಿನಾಂಕ: 10–07–1996ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದಂತೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. ನಂ. 2448

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ENERGY SECRETARIAT

**Sub:** Transfer of 1.7 MW wind power capacity in favour of M/s The Campco Limited-reg.

Read:

1. Government Order No. EN 337 NCE 2006 dated: 16-10-2006.
2. Government Order No. EN 09 NCE 2007 dated: 12-01-2007.
3. Government Order No. EN 432 NCE 2010 dated: 16-12-2010.
4. Government Order No. EN 318 NCE 2011 dated: 26-07-2011.
5. Letter No. KRED/08/CAMPCO-1.7 MW (RSR-30.6) 2011/2910 dated: 23-09-2011 received from the Managing Director, Karnataka Renewable Energy Development Limited, Bangalore.

**PREAMBLE:-**

In the Government Order read at (1) above, sanction has been accorded for implementation of 63.00 M.W capacity Wind Power Project at Shimoga, Bellary and Belgaum Districts in favour of M/s R. Sree Ramulu Reddy & Co.

In the Government Order read at (2) above, permission has been accorded for the change of company's name from M/s R. Sree Ramulu Reddy & Co. to M/s RSR Power Private Limited.

In the Government Order read at (3) above, sanction has been accorded for enhancement of wind power capacity from 7.00 MW to 30.60 MW at Shirgaon, Naghral and Girgaon of Belgaum Districts in favour of M/s RSR Power Private Limited.

In the letter read at (4) above, the Managing Director, Karnataka Renewable Energy Development Limited, Bangalore has recommended for transfer of 1.70 MW Wind Power capacity from out of 30.60 MW allotted to M/s RSR Power Pvt. Ltd. in favour of M/s. The Campco Limited. As the land belongs to Private and the power generated would be for captive consumption of wind power sale and the project would be commissioned during December 2011.

The proposal has been examined in detail and hence the following order:-

**Government Order No. EN 369 NCE 2011, Bangalore, Dated: 26-09-2011**

Government is pleased to accord approval for transfer of 1.70 MW Wind Power capacity from out of 30.60 MW allotted to M/s. RSR Power Pvt. Ltd. at Belgaum District in favour of M/s. The Campco Limited as detailed below and subject to the following conditions:-

| Village Name | Taluk/District | MW | Land Survey No. | No. of WTG's | Extent in land | Wind Turbine Generator Location No. |
|---|---|---|---|---|---|---|
| NEJ | Chikkodi/Belgaum | 1.70 | 412/4&5 | 2 Nos. | 2 Acres per WTG of capacity 0.85 MW | GNS 30<br>GNS 31 |

1. **M/s. The Campco Limited** shall execute an agreement with Government within 45 (forty five) days from the date of issue of this Order.
2. The Company should commission the project by 31-12-2011 and give an undertaking to that effect.
3. **The Power Generated will be for Captive Consumption and third party sale.**
4. The Government reserves the right to Cancel/modify this Order.

The terms and conditions of the Government Order read at (1) above shall IPSO FACTO be applicable.

By Order and in the name of the Governor of Karnataka
**Suresh B. Krishnappanavar**
Under Secretary to Government
Energy Department.

PR No. 2449

## ಶಿಕ್ಷಣ ಸಚಿವಾಲಯ

**ವಿಷಯ :** ವಾಣಿಜ್ಯ ಶಿಕ್ಷಣದ ಶಾಲೆಗಳಲ್ಲಿ ಬೋಧನಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 54 ಎಲ್‌ಸಿಇ 2008 ದಿನಾಂಕ: 31–12–2008.
2. ಕರ್ನಾಟಕ ರಾಜ್ಯ ವಾಣಿಜ್ಯ ವಿದ್ಯಾಶಾಲೆಗಳ ಸಂಘದ ಪತ್ರ ದಿನಾಂಕ: 23–03–2011.
3. ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ವಾ.ಶಿ. 27/ಮಾಸಿಕ/ಶುಲ್ಕ/23663/2011–12 ದಿನಾಂಕ: 25–06–2011.

**ಪ್ರಸ್ತಾವನೆ:**

ರಾಜ್ಯದ ವಾಣಿಜ್ಯ ಶಿಕ್ಷಣದ ಶಾಲೆಗಳಲ್ಲಿ ಬೋಧನಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪರಿಷ್ಕರಿಸಲಾಗಿದೆ. ಕರ್ನಾಟಕ ರಾಜ್ಯ ವಾಣಿಜ್ಯ ವಿದ್ಯಾಶಾಲೆಗಳ ಸಂಘವು ಮೇಲೆ (02)ರಲ್ಲಿ ಓದಲಾದ ದಿನಾಂಕ: 23–03–2011 ರಂದು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಮನವಿಯನ್ನು ನೀಡಿ, ವಾಣಿಜ್ಯ ಶಿಕ್ಷಣದ ಬೋಧನಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು 2008ರಲ್ಲಿ ಪರಿಷ್ಕರಿಸಲಾಗಿದೆ. ಇದನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಪರಿಷ್ಕರಿಸಬೇಕಾಗಿರುವುದರಿಂದ ಕೂಡಲೇ ಪರಿಷ್ಕರಿಸಿ ಆದೇಶ ಹೊರಡಿಸುವಂತೆ ಕೋರಿ, ಪರಿಷ್ಕರಿಸಲು ಕೋರಿರುವ ಬೋಧನಾ ಶುಲ್ಕ ಹಾಗೂ ಇತರೆ ಶುಲ್ಕಗಳ ವಿವರವನ್ನು ನೀಡಿರುತ್ತಾರೆ.

ನಿರ್ದೇಶಕರು (ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸಂಘದ ಮನವಿಯನ್ನು ಪರಿಶೀಲಿಸಿ, ದಿನಾಂಕ: 25–06–2011ರ ಮೇಲೆ (03)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಬೋಧನಾ ಶುಲ್ಕ ಹಾಗೂ ಇತರೆ ಶುಲ್ಕಗಳನ್ನು ದಿನಾಂಕ: 31–12–2008 ರಲ್ಲಿ ಪರಿಷ್ಕರಿಸಲಾಗಿದ್ದು, ಸುಮಾರು ಎರಡೂವರೆ ವರ್ಷಗಳಾಗಿರುವುದರಿಂದ ಸಂಘದ ಪದಾಧಿಕಾರಿಯವರೊಂದಿಗೆ ವಿಚಾರ ವಿನಿಯಮ ಮಾಡಿ, ಕೆಳಕಂಡ ಪರಿಷ್ಕೃತ ಶುಲ್ಕಗಳ ವಿವರಗಳನ್ನು ನೀಡಿದ್ದು, ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ವಿಷಯ | ದರ್ಜೆ | ಪ್ರಸ್ತುತ ದರ | ಶಾಲಾ ಸಂಘದ ಬೇಡಿಕೆ | ಇಲಾಖೆಯ ಶಿಫಾರಸ್ಸು |
|---|---|---|---|---|---|
| 01 | ಅರ್ಜಿ ಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 30–00 | 100–00 | 50–00 |
| 02 | ದಾಖಲಾತಿ ಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 30–00 | 100–00 | 50–00 |
| 03 | ವಾಚನಾಲಯ ಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 30–00 | 100–00 | 50–00 |

| | | | | | |
|---|---|---|---|---|---|
| 04 | ದಂಡ ಶುಲ್ಕ | ಎಲ್ಲಾ ದರ್ಜೆ | 15–00 | 50–00 | 10–00 [11ನೇ ತಾರೀಖಿ ನಿಂದ 15ನೇ ತಾರೀಖಿನವರೆಗೆ 20–00 [16ನೇ ತಾರೀಖಿ ನಿಂದ 31ನೇ ತಾರೀಖಿನವರೆಗೆ] |
| 05 | ಮಾಸಿಕ ಶುಲ್ಕ ಎಲ್ಲಾ ವಿಷಯಗಳು | ಪ್ರಥಮ<br>ಮಧ್ಯಮ<br>ಪ್ರೌಢ<br>ಪ್ರವೀಣ | 100–00<br>110–00<br>110–00<br>130–00 | 200–00<br>225–00<br>250–00<br>300–00 | 150–00<br>175–00<br>175–00<br>200–00 |
| **ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಇತರೆ ಶುಲ್ಕಗಳು** | | | | | |
| 06 | ಮೆಕಾನಿಸಂ ಶುಲ್ಕ ಬೆರಳಚ್ಚು ವಿಷಯಗಳಿಗೆ ಮಾತ್ರ | ಪ್ರಥಮ<br>ಪ್ರೌಢ<br>ಪ್ರವೀಣ | 65–00<br>75–00<br>85–00 | 125–00<br>125–00<br>160–00 | 75–00<br>85–00<br>100–00 |
| 07 | ಬೆರಳಚ್ಚು ಯಂತ್ರದ ಬಾಡಿಗೆ [ಎಲ್ಲಾ ವಿಷಯಗಳಿಗೆ] | ಎಲ್ಲಾ ದರ್ಜೆ | 65–00 | 125–00 | 75–00 |
| 08 | ಪೀಠೋಪಕರಣಗಳ ಬಾಡಿಗೆ [ಬೆರಳಚ್ಚು ಪರೀಕ್ಷೆಗಳಿಗೆ ಮಾತ್ರ] | ಎಲ್ಲಾ ದರ್ಜೆ | 40–00 | 100–00 | 50–00 |
| 09 | ಸಾಗಾಣಿಕೆ ವೆಚ್ಚ (ಬೆರಳಚ್ಚು ಪರೀಕ್ಷೆಯ ಎಲ್ಲಾ ವಿಷಯಗಳಿಗೆ] | ಎಲ್ಲಾ ದರ್ಜೆ | 25–00 | 50–00 | 50–00 |

ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಮೇಲೆ [03] ರಲ್ಲಿ ಓದಲಾದ ಪತ್ರದಲ್ಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 239 ಎಸ್‌ಒಹೆಚ್ 2011, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ವಾಣಿಜ್ಯ ಶಿಕ್ಷಣದ ಶಾಲೆಗಳಲ್ಲಿ ಬೋಧನೆ ಮತ್ತು ಇತರೆ ಶುಲ್ಕಗಳನ್ನು ಕೆಳಕಂಡಂತೆ ಪರಿಷ್ಕರಿಸಿ, ಈ ಆದೇಶ ಹೊರಡಿಸಿದ ದಿನಾಂಕದಿಂದ ಭವಿಷ್ಯಾನ್ವಯವಾಗಿ ಜಾರಿಗೆ ಬರುವಂತೆ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ವಿಷಯ | ದರ್ಜೆ | ದಿ: 31-12-2008ರ ಆದೇಶದಂತೆ ಇರುವ ಪ್ರಸ್ತುತ ಶುಲ್ಕ ರೂ.ಗಳಲ್ಲಿ | ಪರಿಷ್ಕರಿಸಿದ ದರ ರೂ.ಗಳಲ್ಲಿ |
|---|---|---|---|---|
| **01.** | ಅರ್ಜಿ ಶುಲ್ಕ [ಎಲ್ಲಾ ವಿಷಯಗಳಿಗೆ] | ಎಲ್ಲಾ ದರ್ಜೆಗಳಿಗೆ | **30–00** | **50–00** |
| **02.** | ದಾಖಲಾತಿ ಶುಲ್ಕ [ಎಲ್ಲಾ ವಿಷಯಗಳಿಗೆ] | ಎಲ್ಲಾ ದರ್ಜೆಗಳಿಗೆ | **30–00** | **50–00** |
| **03.** | ವಾಚನಾಲಯ ಶುಲ್ಕ [ಎಲ್ಲಾ ವಿಷಯಗಳಿಗೆ] | ಎಲ್ಲಾ ದರ್ಜೆಗಳಿಗೆ | **30–00** | **50–00** |
| **04.** | ಮಾಸಿಕ ದಂಡ ಶುಲ್ಕ [ಎಲ್ಲಾ ವಿಷಯಗಳಿಗೆ] | ಎಲ್ಲಾ ದರ್ಜೆಗಳಿಗೆ | **15–00** | **10–00 [11ನೇ ತಾರೀಖಿನಿಂದ 15ನೇ ತಾರೀಖಿನವರೆಗೆ 20–00 [16ನೇ ತಾರೀಖಿನಿಂದ 31ನೇ ತಾರೀಖಿನವರೆಗೆ]** |
| **05.** | ಮಾಸಿಕ ಶುಲ್ಕ [ಎಲ್ಲಾ ವಿಷಯಗಳಿಗೆ] | ಪ್ರಥಮ ದರ್ಜೆ | **100–00** | **150–00** |
| | | ಮಧ್ಯಮ ದರ್ಜೆ | **110–00** | **175–00** |
| | | ಪ್ರೌಢ ದರ್ಜೆ | **110–00** | **175–00** |
| | | ಪ್ರವೀಣ | **130–00** | **200–00** |
| **06.** | ಮೆಕಾನಿಸಂ ಶುಲ್ಕ [ಬೆರಳಚ್ಚು ಪರೀಕ್ಷೆಗೆ ಹಾಜರಾಗುವ ವಿದ್ಯಾರ್ಥಿಗಳಿಗೆ ಮಾತ್ರ] | ಪ್ರಥಮ ದರ್ಜೆ | **65–00** | **75–00** |
| | | ಪ್ರೌಢ ದರ್ಜೆ | **75–00** | **85–00** |
| | | ಪ್ರವೀಣ | **85–00** | **100–00** |
| **07.** | ಬೆರಳಚ್ಚು ಯಂತ್ರದ ಬಾಡಿಗೆ [ಪರೀಕ್ಷೆಗೆ ಹಾಜರಾಗುವ ವಿದ್ಯಾರ್ಥಿಗಳಿಗೆ] | ಎಲ್ಲಾ ದರ್ಜೆಗಳಿಗೆ | **65–00** | **75–00** |

| | | | | |
|---|---|---|---|---|
| 08. | ಪೀಠೋಪಕರಣಗಳ ಬಾಡಿಗೆ (ಬೆರಳಚ್ಚು ಪರೀಕ್ಷೆ ವಿದ್ಯಾರ್ಥಿಗಳಿಗೆ) | ಎಲ್ಲಾ ದರ್ಜೆಗಳಿಗೆ | 40–00 | 50–00 |
| 09. | ಸಾಗಾಣಿಕೆ ವೆಚ್ಚ [ಬೆರಳಚ್ಚು ಪರೀಕ್ಷೆ ವಿದ್ಯಾರ್ಥಿಗಳಿಗೆ] | ಎಲ್ಲಾ ದರ್ಜೆಗಳಿಗೆ | 25–00 | 50–00 |

ಈ ಆದೇಶವನ್ನು ದಿನಾಂಕ: 10–07–1996ರ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 96 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಟಿ. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ [ಪ್ರೌಢ]

ಪಿ.ಆರ್. ನಂ. 2450

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರ ಆಪ್ತ ಶಾಖೆಗೆ ಸಿಬ್ಬಂದಿವರ್ಗದ ಪ್ರಮಾಣವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 421 ಎಂಎಸ್‌ಓ 1986, ದಿನಾಂಕ: 23–06–1986.
2. ಸರ್ಕಾರದ ಅಧಿಸೂನೆ ಸಂಖ್ಯೆ: ಸಿಆಸುಇ 462 ಸಿಶಾಸೇ 1988: ದಿನಾಂಕ: 28/09/1989
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000; ದಿನಾಂಕ: 08/06/2001
4. ನಿವಾಸಿ ಆಯುಕ್ತರು, ನವದೆಹಲಿ ಇವರ ಪತ್ರ; ದಿನಾಂಕ: 09–11/07/2008.

**ಪ್ರಸ್ತಾವನೆ :**

ಮೇಲೆ ಓದಲಾದ (1), (2) & (3) ರಲ್ಲಿ ಸರ್ಕಾರಿ ಆದೇಶಗಳಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ಅಪರ ಮುಖ್ಯ ಕಾರ್ಯದರ್ಶಿಗಳು, ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು, ಆಯುಕ್ತರು ಮತ್ತು ಇತರೆ ಹಿರಿಯ ಅಧಿಕಾರಿಗಳ ಆಪ್ತ ಶಾಖೆಗಳಿಗೆ ಸಿಬ್ಬಂದಿವರ್ಗದ ಪ್ರಮಾಣವನ್ನು ನಿಗದಿಪಡಿಸಲಾಗಿರುತ್ತದೆ.

ಮೇಲೆ (4) ರಲ್ಲಿ ಓದಲಾದ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರ ಪತ್ರದಲ್ಲಿ ಉಲ್ಲೇಖ (1), (2) & (3) ರ ಸರ್ಕಾರಿ ಆದೇಶಗಳಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ಅಪರ ಮುಖ್ಯ ಕಾರ್ಯದರ್ಶಿಗಳು, ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳ ಮಟ್ಟದ ಅಧಿಕಾರಿಗಳ ಆಪ್ತ ಶಾಖೆಗೆ ಸಿಬ್ಬಂದಿವರ್ಗದ ಪ್ರಮಾಣವನ್ನು ನಿಗದಿಪಡಿಸಲಾಗಿದೆ. ಅದರಂತೆ ನಿವಾಸಿ ಆಯುಕ್ತರ ಕಛೇರಿ, ಕರ್ನಾಟಕ ಭವನ, ನವದೆಹಲಿ ಇಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಮಟ್ಟದ ಅಧಿಕಾರಿಗಳು, ನಿವಾಸಿ ಆಯುಕ್ತರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಕಾರಣ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿಯಲ್ಲಿಯೂ ಹೆಚ್ಚುವರಿ ಹುದ್ದೆಗಳನ್ನು ಸೃಷ್ಟಿ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 73 ಆಶೀಸೇ 2008, ಬೆಂಗಳೂರು, ದಿನಾಂಕ : 12–10–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ನಿವಾಸಿ ಆಯುಕ್ತರು, ಕರ್ನಾಟಕ ಭವನ ನವದೆಹಲಿ ಇವರು ಸರ್ಕಾರದ ಕಾರ್ಯದರ್ಶಿಗಳ ದರ್ಜೆಯ ಅಧಿಕಾರಿಗಳಾಗಿರುವುದರಿಂದ ಇವರ ಆಪ್ತ ಶಾಖೆಗೆ ಸಿಬ್ಬಂದಿವರ್ಗದ ಪ್ರಮಾಣವನ್ನು ಈ ಆದೇಶದ ಅನುಬಂಧದಲ್ಲಿ ಸೂಚಿಸಿರುವಂತೆ ಸಿಬ್ಬಂದಿ ಮಂಜೂರಾತಿಗೆ ಅನುಮತಿಸಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 485 ವೆಚ್ಚ–12/2011 ದಿನಾಂಕ: 05/09/2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜೋಸ್ ಗ್ಸೇವಿಯರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ–2)

### ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 73 ಆಶೀಸೇ 2008; ದಿನಾಂಕ: 12/10/2011 ರ ಅನುಬಂಧ

| ಕಛೇರಿ ಹೆಸರು | ಶೀಘ್ರಲಿಪಿಗಾರರು | ಭಾಷಾಂತರಕಾರರು (ಶಾಖಾಧಿಕಾರಿ/ ಹಿರಿಯ ಸಹಾಯಕ) | ಸಹಾಯಕ | ಕಿರಿಯ ಸಹಾಯಕರು | ಬೆರಳಚ್ಚು ಗಾರರು | ವಾಹನ ಚಾಲಕ | ದಲಾಯತ್ |
|---|---|---|---|---|---|---|---|
| ನಿವಾಸಿ ಆಯುಕ್ತರ ಆಪ್ತ ಶಾಖೆ | 2 ಪತ್ರಾಂಕಿತ ಆಪ್ತ ಸಹಾಯಕರು/ ಹಿರಿಯ ಶೀಘ್ರಲಿಪಿಗಾರರು | 1 ಶಾಖಾಧಿಕಾರಿ/ಹಿರಿಯ ಸಹಾಯಕರು | – | 1 | – | 1 | 2 |

**ಜೋಸ್ ಗ್ಸೇವಿಯರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ–2)

ಪಿ.ಆರ್. 2451

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುದಾನದಿಂದ ಯೋಜನೆಗೆ ಸಂಬಂಧಿಸಿದ ಸಾಧಿಲ್ವಾರು ವೆಚ್ಚವನ್ನು ಭರಿಸುವ ಬಗ್ಗೆ.

**ಓದಲಾದ :** ಸರ್ಕಾರದ ಆದೇಶ ಸಂಖ್ಯೆ: ಯೋಇ 10 ಪಿಎಂಎಂ 2011, ದಿನಾಂಕ: 22-06-2011.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ 2011-12ನೇ ಸಾಲಿನ ಆರ್ಥಿಕ ವರ್ಷದಿಂದ ಜಾರಿಗೆ ಬರುವಂತೆ ಲೆಕ್ಕಶೀರ್ಷಿಕೆ 4575-60-800-0-01-132 (ಯೋಜನೆ) ಅಡಿ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಗೆ ಒದಗಿಸಲಾಗಿರುವ ಅನುದಾನದ ಶೇಕಡ 0.45 ರಷ್ಟನ್ನು ಜಿಲ್ಲಾಮಟ್ಟದಲ್ಲಿ ಮತ್ತು ಶೇಕಡ 0.05 ರಷ್ಟನ್ನು ರಾಜ್ಯ ಮಟ್ಟದಲ್ಲಿ ಯೋಜನೆಗೆ ಸಂಬಂಧಿಸಿದಂತೆ ಕಾರ್ಯನಿರ್ವಹಿಸಲು ಗಣಕಯಂತ್ರ ಖರೀದಿ ಕಚೇರಿ ವೆಚ್ಚ ಮಾಹಿತಿ ನಿರ್ವಹಣಾ ವ್ಯವಸ್ಥೆಯ ನಿರ್ವಹಣೆ/ಸುಧಾರಣೆಗಾಗಿ ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳುವ ಪ್ರೋಗ್ರಾಮರ್ ಹಾಗೂ ಡಾಟಾ ಎಂಟ್ರಿ ಆಪರೇಟರ್‌ಗಳ ಸಂಭಾವನೆ, ಯೋಜನೆಯನ್ನು ಅನುಷ್ಠಾನಗೊಳಿಸುವ ಅಧಿಕಾರಿ/ಸಿಬ್ಬಂದಿಗಳಿಗೆ ತರಬೇತಿ ನೀಡಲು ತಗಲುವ ವೆಚ್ಚ ಮತ್ತು ಯೋಜನೆಗೆ ಸಂಬಂಧಿಸಿದ ಇನ್ನಿತರೆ ವೆಚ್ಚಗಳನ್ನು ಭರಿಸಲು ಅನುಮತಿಸಲಾಗಿದೆ. ಈ ಎಲ್ಲಾ ವೆಚ್ಚಗಳನ್ನು ಲೆಕ್ಕಶೀರ್ಷಿಕೆ 4575-60-800-0-01-132 (ಯೋಜನೆ) ಅಡಿ ಭರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 10 ಪಿಎಂಎಂ 2011 ದಿನಾಂಕ : 15-09-2011.**

2011-12ನೇ ಸಾಲಿನಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಗೆ, ಸಂಬಂಧಿಸಿದಂತೆ ಗಣಕ ಯಂತ್ರ ಖರೀದಿ, ಕಚೇರಿ ವೆಚ್ಚ ಮಾಹಿತಿ ನಿರ್ವಹಣಾ ವ್ಯವಸ್ಥೆಯ ನಿರ್ವಹಣೆಗಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಂಡಿರುವ ಡಾಟಾ ಎಂಟ್ರಿ ಆಪರೇಟರ್ಸ್ ಹಾಗೂ ಕಂಪ್ಯೂಟರ್ ಪ್ರೋಗ್ರಾಮರ್‌ಗಳ ಸಂಭಾವನೆ ಅಧಿಕಾರಿ/ಸಿಬ್ಬಂದಿಗಳ ತರಬೇತಿ ಹಾಗೂ ಇನ್ನಿತರೆ ವೆಚ್ಚಗಳನ್ನು ಲೆಕ್ಕಶೀರ್ಷಿಕೆ 4575-60-800-0-01-132 (ಯೋಜನೆ) ಅಡಿ ಒದಗಿಸಲಾಗಿರುವ ಅನುದಾನದಿಂದ ಭರಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 48 ವೆಚ್ಚ -6/2011, ದಿನಾಂಕ: 03-05-2011 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು

ಸಾಂಖ್ಯಿಕ ಇಲಾಖೆ

ಪಿ.ಆರ್. 2452

## COMMERCE AND INDUSTRIES SECRETARIAT

**Sub :** Transfer of the project approval given to M/s KMMI Steel Pvt. Ltd., in favour of M/s Minera Steel and Power Pvt. Ltd., -reg.

**Read :**
1. Government Order No.: CI 84 SPI 2008, dated 13-05-2008.
2. Government Order No.: CI 84 SPI 2008, dated 11-03-2011.
3. Proceedings of the 25th State High Level Clearance Committee (SHLCC) Meeting held on 14-07-2011.

**Preamble:**

Project proposal of M/s KMMI Steel Pvt. Ltd., Bellary to establish "Mini Steel Plant- 1.5 lakhs TPA with 15 MW Power Generation". With an investment of Rs. 212 crores, in their existing premises of Sponge Iron Plant at Sy. No. 131, Yerabanahalli Village, Sandur Taluk, Bellary District was approved vide G.O. read at (1) above.

Government has approved the extension of time to implement the project by one year, vide G.O. read at (2) above.

The project proponent vide letter dated 13-05-2011 has requested for change of name of the company from M/s KMMI Steel Pvt. Ltd. to M/s Minera Steel and Power Pvt. Ltd.

In The 25th State High Level Clearance Committee (SHLCC) Meeting held on 14-07-2011, the proposal of the Company was discussed and approved.

Government has examined the recommendations made by the State High Level Clearance Committee in the 25th Meeting held on 14-07-2011, in all aspects.

Hence the following Order:-

**Government Order No. CI 84 SPI 2008, Bangalore, dated 12-09-2011**

In the circumstances explained in the preamble, Government is pleased accord approval for the transfer of project approval given to M/s KMMI Steel Pvt. Ltd., in favour of M/s Minera Steel and Power Pvt. Ltd.

Other terms and conditions, remain the same as in the G.O. read at (1) above.

By Order and in the name of the Governor of Karnataka

**A.V. Srinivasa Dikshit**

Desk Officer (Technical Cell)

Commerce & Industries Department

P.R. 2453

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ತಾಲ್ಲೂಕು ಬುಡಶೆಟ್ನಾಳ ಗ್ರಾಮದ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮನೆಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 18–10–2010ರ ಪತ್ರ ಸಂಖ್ಯೆ: ಮುಇಂ/ಸನೀ(ಉ/ಭೂಸ್ವಾಪ್ರ/2011–12/4704.

**ಪ್ರಸ್ತಾವನೆ :**

ಕೊಪ್ಪಳ ತಾಲ್ಲೂಕು ಬುಡಶೆಟ್ನಾಳ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಬುಡಶೆಟ್ನಾಳ ಗ್ರಾಮದ ಮನೆ ನಂ. 1/1/88ರ ಮನೆಗೆ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ಕೊಪ್ಪಳ ಇವರು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 18–08–2010ರ ಪತ್ರದಲ್ಲಿ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 02–07–1992.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 23–05–1994.

ಭೂಪರಿಹಾರ ಪಡೆದ ಮಾಲೀಕರು ಸ್ವಾಧೀನಪಡಿಸಿಕೊಂಡ ಮನೆ ಮತ್ತು ಗುಡಿಸಲು ಕಟ್ಟಡಗಳಿಗೆ ನೀಡಿರುವ ಪರಿಹಾರ ಅಸಮರ್ಪಕವಾಗಿದೆಯೆಂದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ವ್ಯವಹಾರ ನ್ಯಾಯಾಧೀಶರ ನ್ಯಾಯಾಲಯ (ಹಿರಿಯ ವಿಭಾಗ) ಕೊಪ್ಪಳ ಇಲ್ಲಿ ಭೂಸ್ವಾಧೀನ ಕಾಯ್ದೆ ಕಲಣ 18(1)ರ ಅಡಿಯಲ್ಲಿ ಎಲ್.ಎ.ಸಿ. ಸಂಖ್ಯೆ: 2/04ನ್ನು ದಾಖಲಿಸಿದ್ದು, ನ್ಯಾಯಾಲಯವು ಮನೆಯ ಮಾರುಕಟ್ಟೆ ಬೆಲೆಯನ್ನು ರೂ. 1,66,339/– ಗಳಿಗೆ ನಿಗದಿಪಡಿಸಿ ಇತರೆ ಸವಲತ್ತುಗಳೊಂದಿಗೆ ಪರಿಹಾರ ನೀಡಲು ಆದೇಶಿಸಿದೆ ಎಲ್.ಎ.ಸಿ. ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಎಂಎಫ್ಎ 9125/05ನ್ನು ದಾಖಲಿಸಿದ್ದು, ಉಚ್ಚ ನ್ಯಾಯಾಲಯವು ಮೇಲ್ಮನವಿಯನ್ನು ವಜಾಗೊಳಿಸಿದೆ.

ಎಂ.ಎಫ್.ಎ. 9125/06ರ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು ಪತ್ರ ಸಂಖ್ಯೆ: ಲಾ 239 ಎಲ್ಎಸ್ಪಿ 2009, ದಿನಾಂಕ 04–03–2009ರಲ್ಲಿ ಅಭಿಪ್ರಾಯ ನೀಡಿದೆ.

ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್ಎಸಿ | ಎಂಎಫ್ಎ | ಬುಡಶೆಟ್ನಾಳ ಗ್ರಾಮದ ಮನೆ ನಂ. | ವಿಸ್ತೀರ್ಣ ಚ.ಮೀ. | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 2/04 | 9125/06 | 1/1/88 | 42–50 | 4,35,468–00 |
| | **ಒಟ್ಟು** | | | | **4,35,468–00** |

**ಸರ್ಕಾರದ ಆದೇಶ ಸಂಖ್ಯೆ : ಸನೀಇ 38 ಭೂಸ್ವಾಪ್ರ 2011 ಬೆಂಗಳೂರು, ದಿನಾಂಕ : 03ನೇ ಅಕ್ಟೋಬರ್ 2011.**

ಕೊಪ್ಪಳ ತಾಲ್ಲೂಕು ಬುಡಶೆಟ್ನಾಳ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಬುಡಶೆಟ್ನಾಳ ಗ್ರಾಮದ ಮನೆ ನಂ. 1/1/88ರ ಮನೆಗೆ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ಕೊಪ್ಪಳ ಇವರು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಮೊತ್ತ ರೂ. 4,35,468–00 ಗಳನ್ನು (ನಾಲ್ಕು ಲಕ್ಷದ ಮೂವತ್ತೈದು ಸಾವಿರದ ನಾನೂರ ಅರವತ್ತೆಂಟು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಗೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 4,35,468/– ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಕೆ.ಸಿ. ಸಿದ್ದಪ್ಪ

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2454

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಜಿ.ಎಂ. ಯಾತನೂರು, ಹಿಂದಿನ ಎ.ಎಸ್.ಪಿ. ಬೀದರ್ ಜಿಲ್ಲೆ ರವರ ವಿರುದ್ಧದ ಇಲಾಖೆ ವಿಚಾರಣೆಯ ಪರಿಷ್ಕೃತ ದಂಡನೆ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಇ 5 ಪೊಸಿಪ 2010 ದಿನಾಂಕ 09-09-2010.

2) ಮಹಾಲೇಖಪಾಲರ ಪತ್ರ ಸಂಖ್ಯೆ GE Cell 1/P2/PF212/1250 ದಿನಾಂಕ 14-10-2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಜಿ.ಎಂ. ಯಾತನೂರ್, ಅಡಿಷನಲ್ ಎಸ್.ಪಿ. ಬೀದರ್ ಜಿಲ್ಲೆ ರವರು ಸಂತಾಪುರ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ: 7/07 ಕಲಂ 20ಬಿ ಎನ್.ಡಿ.ಪಿ.ಎಸ್. ಕಾಯ್ದೆ ಅಡಿಯಲ್ಲಿ ದಾಖಲಾದ ಪ್ರಕರಣದಲ್ಲಿನ ಆರೋಪಿ ಶಾಂತಪ್ಪನನ್ನು ರಕ್ಷಿಸಬೇಕೆಂಬ ಉದ್ದೇಶದಿಂದ ತನಿಖೆಯ ದಾರಿಯನ್ನು ತಪ್ಪಿಸಿ ತನಿಖಾಧಿಕಾರಿಗಳಿಗೆ ತಪ್ಪು ಸೂಚನೆಗಳನ್ನು ನೀಡಿ ತನಿಖೆಯನ್ನು ತಪ್ಪು ದಾರಿಗೆ ಎಳೆಯುವ ಮೂಲಕ ಅವರ ಕರ್ತವ್ಯದಲ್ಲಿ ಲೋಪ, ಅಧಿಕಾರ ದುರುಪಯೋಗ, ದುರ್ನಡತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ ಇವರ ವಿರುದ್ಧ ಕೆ.ಎಸ್.ಪಿ. (ಡಿ.ಪಿ) ನಿಯಮಗಳು, 1965ರ ನಿಯಮ 6 ರಡಿಯಲ್ಲಿ ದಿನಾಂಕ 06-03-2009 ರಂದು ಇಲಾಖಾ ವಿಚಾರಣೆಗೆ ಆದೇಶಿಸಿ ವಿಚಾರಣಾಧಿಕಾರಿಗಳನ್ನು ನೇಮಿಸಿ. ವಿಚಾರಣಾಧಿಕಾರಿಗಳಿಂದ ವಿಚಾರಣಾ ವರದಿಯನ್ನು ಪಡೆಯಲಾಗಿದೆ. ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಲ್ಲಿ ವಿಧಿಸಲಾದ ಇಲ್ಲಾ ಕ್ರಮಗಳನ್ನು ಪೂರೈಸಿರುವುದಾಗಿ ದೃಢೀಕರಿಸಿ ತಮ್ಮ ಅಂತಿಮ ವರದಿಯನ್ನು ಸಲ್ಲಿಸಿರುತ್ತಾರೆ. ವರದಿಯಲ್ಲಿ ಅಭಿಯೋಗ ಪರವಾಗಿ 16 ಸಾಕ್ಷಿಗಳನ್ನು ವಿಚಾರಣೆ ಮಾಡಲಾಗಿದ್ದು, ವಿಚಾರಣೆಯ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ. ಹಾಗೂ ರಕ್ಷಣಾ ಸಾಕ್ಷಿದಾರರೊಬ್ಬರನ್ನು ಹಾಗೂ 8 ಪುಟಗಳ ಪ್ರತಿ ರಕ್ಷಣಾ ಲಿಖಿತ ದಾಖಲಾತಿಗಳನ್ನು ಸಹ ಪರಿಶೀಲಿಸಿರುತ್ತಾರೆ. ಎಲ್ಲಾ ಅಂಶಗಳನ್ನು ಪರಿಶೀಲಿಸಿದ ವಿಚಾರಣಾಧಿಕಾರಿಯವರು ದಿನಾಂಕ 03-03-2008 ರಂದು ಆರೋಪಿತ ಪೊಲೀಸ್ ಅಧಿಕಾರಿಯು ಪಿ.ಎಸ್.ಐ. ಸಂತಾಪುರ ಪೊಲೀಸ್ ಠಾಣೆ ರವರಿಗೆ ತಲೆ ತಪ್ಪಿಸಿಕೊಂಡ 3ನೇ ಪ್ರಮುಖ ಆರೋಪಿಯನ್ನು ಹೊರತುಪಡಿಸಿ ಈಗಾಗಲೇ ದಸ್ತಗಿರಿಯಾದ ಇಬ್ಬರು ಆರೋಪಿಗಳ ವಿರುದ್ಧ ದೋಷಾರೋಪಣೆ ಪಟ್ಟಿಯನ್ನು ಸಲ್ಲಿಸುವಂತೆ ತಿಳಿಸಿ 3ನೇ ಆರೋಪಿಯನ್ನು ದೋಷಾರೋಪಣೆ ಪಟ್ಟಿಯಲ್ಲಿ ಸೇರಿಸುವುದು ಸಮಂಜಸವಲ್ಲವೆಂದು ತಿಳಿಸಿರುವುದು ಕಂಡು ಬಂದಿದ್ದು. ಇದು 3ನೇ ಆರೋಪಿ ಶಾಂತಪ್ಪನಿಗೆ ಸಹಾಯಕ ಮಾಡುವ ದೃಷ್ಟಿಯಿಂದ ತನಿಖಾಧಿಕಾರಿಯವರಿಗೆ ಲಿಖಿತ ಜ್ಞಾಪನ ನೀಡಿ ತಪ್ಪು ದಾರಿಗೆ ಎಡೆ ಮಾಡಿಕೊಟ್ಟಂತಾಗುತ್ತದೆ ಎಂಬ ಅಭಿಪ್ರಾಯಕ್ಕೆ ವಿಚಾರಣಾಧಿಕಾರಿಗಳು ಬಂದಿರುತ್ತಾರೆ. ಆದರೂ ಸಹ ಈ ಪ್ರಕರಣದಲ್ಲಿ 3ನೇ ಆರೋಪಿಯ ಪತ್ತೆ ಕಾರ್ಯವು ನಿಲ್ಲದೇ ಅವರನ್ನು ದಿನಾಂಕ 14-06-2008 ರಂದು ಬಂಧಿಸಿ ನ್ಯಾಯಾಂಗ ವಿಚಾರಣೆಗೆ ಒಳಪಡಿಸಿರುವುದು ಇಲಾಖಾ ವಿಚಾರಣೆಯ ಸಾಕ್ಷಿಗಳ ಹೇಳಿಕೆಯಿಂದ ಕಂಡು ಬಂದಿರುತ್ತದೆ ಎಂದು ವಿಚಾರಣಾಧಿಕಾರಿಗಳ ವರದಿಯನ್ವಯ ಶ್ರೀ ಜಿ.ಎಂ. ಯಾತನೂರ್ ಇವರ ವಿರುದ್ಧದ ದೋಷಾರೋಪಣೆಯು ಸಾಬೀತಾಗಿರುತ್ತದೆ ಎಂದು ವರದಿ ಮಾಡಿರುತ್ತಾರೆ. ಶ್ರೀ ಜಿ.ಎಂ. ಯಾತನೂರ್ ರವರ ಜನ್ಮ ದಿನಾಂಕ: 01-11-1951 ಇದ್ದು, ಇವರು ದಿನಾಂಕ 30-10-2011 ರಂದು ವಯೋ ನಿವೃತ್ತಿ ಹೊಂದಲಿದ್ದಾರೆ. ಆದುದರಿಂದ ಕರ್ನಾಟಕ ಪೊಲೀಸ್ ಅಧಿನಿಯಮ, 1963ರ ಕಲಂ 23(1)(a)(ii) ರನ್ವಯ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವ ದಂಡನೆಯನ್ನು ವಿಧಿಸಿ ಸರ್ಕಾರದ ಆದೇಶ ಸಂಖ್ಯೆ: ಒಇ 5 ಪೊಸಿಪ 2010 ದಿನಾಂಕ 09-09-2010 ರಂದು ಆದೇಶ ಹೊರಡಿಸಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮಹಾಲೇಖಪಾಲರು ದಿನಾಂಕ 01-06-2010 ರಲ್ಲಿ ಅಧಿಕಾರಿಯ ಪ್ರಸ್ತುತ ರೂ. 26850/- ಗಳ ಮೂಲ ವೇತನ ಪಡೆಯುತ್ತಿರುವುದರಿಂದ ಸದರಿ ಹುದ್ದೆಯಲ್ಲಿ ರೂ. 18150-26925/- ರಂತೆ ಗರಿಷ್ಠ ವೇತನದಲ್ಲಿರುವುದರಿಂದ ದಿನಾಂಕ 09-09-2010 ರಂದು ಹೊರಡಿಸಿದ ಆದೇಶದಂತೆ ದಿನಾಂಕ 01-06-2011 ರ ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯಲು ಆಗದ ಕಾರಣ ದಿನಾಂಕ 09-09-2010 ರಂದು ಹೊರಡಿಸಿದ ಆದೇಶಕ್ಕೆ ತಿದ್ದುಪಡಿಯ ಆದೇಶ ಹೊರಡಿಸಲು ಕೋರಿರುತ್ತಾರೆ. ಶ್ರೀ ಯಾತನೂರ ರವರು ತಮ್ಮ ವೇತನ ಶ್ರೇಣಿಯಲ್ಲಿ ಗರಿಷ್ಠ ಮಿತಿಯನ್ನು ತಲುಪಿದ್ದು, ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವುದು ಸಾಧ್ಯವಾಗದ ಕಾರಣ ಶ್ರೀ ಯಾತನೂರರವರಿಗೆ ಪರಿಷ್ಕೃತ ದಂಡನೆಯನ್ನು ವಿಧಿಸಬಹುದಾಗಿದೆ. ಅಂತೆಯೇ, ಇವರ ವೇತನವನ್ನು ಪ್ರಸ್ತುತದ ವೇತನ ಶ್ರೇಣಿಯ ಕೆಳಗಿನ ಒಂದು ಹಂತಕ್ಕೆ ಸಂಚಿತ ಪರಿಣಾಮ ರಹಿತವಾಗಿ ಒಂದು ವರ್ಷದವರೆಗೆ ಕೆಳಗಿಳಿಸುವ ದಂಡನೆಯನ್ನು ವಿಧಿಸಿ ತಿದ್ದುಪಡಿ ಆದೇಶ ಹೊರಡಿಸಲು ನಿರ್ಧರಿಸಿದೆ. ಸದರಿ ಆದೇಶವು ಮೂಲ ದಂಡನೆಯ ಸರ್ಕಾರಿ ಆದೇಶ ದಿನಾಂಕ 09-09-2010 ರಿಂದಲೇ ಜಾರಿಗೆ ಬರುತ್ತದೆ ಎಂದು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 467 ಪೊಸಿಪ 2010 ಬೆಂಗಳೂರು, ದಿನಾಂಕ : 24ನೇ ಸೆಪ್ಟೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಜಿ.ಎಂ. ಯಾತನೂರು, ಹೆಚ್ಚುವರಿ ಪೊಲೀಸ್ ಅಧೀಕ್ಷಕರು, ಬೀದರ್ ಜಿಲ್ಲೆ ರವರ ವಿರುದ್ಧದ ಆರೋಪಗಳು ಸಾಭೀತಾದ ಹಿನ್ನೆಲೆಯಲ್ಲಿ ಒಇ 5 ಪೊಸಿಪ 2010 ದಿನಾಂಕ: 09-09-2010 ರಂದು ಅಧಿಕಾರಿಗಳ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ. ಅಧಿಕಾರಿಗಳು ವೇತನ ಶ್ರೇಣಿಯಲ್ಲಿ ಗರಿಷ್ಠ ಮಿತಿ ತಲುಪಿರುವುದರಿಂದ ದಂಡನೆಯನ್ನು ಪಾಲನೆ ಮಾಡಲು ಸಾಧ್ಯವಾಗದ ಕಾರಣ ಶ್ರೀ ಜಿ.ಎಂ. ಯಾತನೂರ, ಹಿಂದಿನ ಎ.ಎಸ್.ಪಿ., ಬೀದರ ಜಿಲ್ಲೆ ರವರಿಗೆ ಪ್ರಸ್ತುತ ಅಧಿಕಾರಿಗಳ ವೇತನ ಶ್ರೇಣಿಯ ಕೆಳಗಿನ ಒಂದು ಹಂತಕ್ಕೆ ಸಂಚಿತ ಪರಿಣಾಮ ರಹಿತವಾಗಿ ಒಂದು ವರ್ಷದ ವರೆಗೆ ಕೆಳಗಿಳಿಸುವಂತೆ ಪರಿಷ್ಕೃತ ದಂಡನೆ ವಿಧಿಸಿ. ಸದರಿ ದಂಡನೆಯು ದಿನಾಂಕ 09-09-2010 ರಿಂದಲೇ ಜಾರಿಗೆ ಬರುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2455

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ವಸತಿ ಸಚಿವಾಲಯ

**ವಿಷಯ :** ಮೈಸೂರು ಜಿಲ್ಲೆ, ಇಲವಾಲ ಹೋಬಳಿ, ಯಲಚಹಳ್ಳಿ ಮತ್ತು ಮೇಗಳಾಪುರ ಗ್ರಾಮಗಳಲ್ಲಿ ಕರ್ನಾಟಕ ಗೃಹ ಮಂಡಳಿಯು ಮೆ: ಏಂಜಲ್ ಎ.ವಿ. ಅಸೋಸಿಯೇಟ್ಸ್ ಬಿಲ್ಡರ್ಸ್ ಅಂಡ್ ಡೆವಲಪರ್ಸ್, ಬೆಂಗಳೂರು ಇವರೊಂದಿಗೆ ಸಹಭಾಗಿತ್ವ ವಸತಿ ಯೋಜನೆ ಕೈಗೊಳ್ಳಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರ ಕಛೇರಿಯ ಪತ್ರ ಸಂಖ್ಯೆ: ಕಗೃಮಂ/ಜಂನಿ/ನಯೋ/ಜೆವಿ/ಏಂಜಲ್/ಯಲಚಹಳ್ಳಿ/ಮೈಸೂರು/47 /138/2010-11, ದಿನಾಂಕ: 26-07-2011/01-08-2011.

**ಪ್ರಸ್ತಾವನೆ :**

ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ, ಮೆ: ಏಂಜಲ್ ಎ.ವಿ. ಅಸೋಸಿಯೇಟ್ಸ್ ಬಿಲ್ಡರ್ಸ್ ಅಂಡ್ ಡೆವಲಪರ್ಸ್, ಬೆಂಗಳೂರು. ಇವರು ದಿನಾಂಕ: 16/06/2010ರ ಪತ್ರದಲ್ಲಿ ಮೈಸೂರು ಜಿಲ್ಲೆ, ಇಲವಾಲ ಹೋಬಳಿ, ಯಲಚಹಳ್ಳಿ ಮತ್ತು ಮೇಗಳಾಪುರ ಗ್ರಾಮಗಳಲ್ಲಿ ಸುಮಾರು 200 ಎಕರೆ ಜಮೀನಿನಲ್ಲಿ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಹಮ್ಮಿಕೊಳ್ಳುವ ಬಗ್ಗೆ ಆಸಕ್ತಿ ವ್ಯಕ್ತಪಡಿಸಿದ್ದು, ಸದರಿ ಪ್ರಸ್ತಾವನೆಯನ್ನು ದಿನಾಂಕ: 19/07/2010ರ ಸಹಭಾಗಿತ್ವದ ಯೋಜನೆಗಳನ್ನು ಪರಿಶೀಲಿಸುವ ಉಪ-ಸಮಿತಿ ಸಭೆಯಲ್ಲಿ ಹಾಗೂ ದಿನಾಂಕ: 21/07/2010ರ ಮಂಡಳಿ ಸಭೆಯ ಮುಂದೆ ಮಂಡಿಸಲಾಗಿತ್ತು ಎಂದು ಉಪ-ಸಮಿತಿಯ ನಡವಳಿಯಂತೆ, ಪ್ರಸ್ತಾಪಿತ ಜಮೀನುಗಳ ಭೂ-ಉಪಯೋಗದ ಬಗ್ಗೆ ಪರಿಶೀಲಿಸಿ ಮೈಸೂರು ನಗರದ ಮಾಸ್ಟರ್ ಪ್ಲಾನ್ ವ್ಯಾಪ್ತಿಗೆ ಒಳಗೊಂಡಿಲ್ಲದಿರುವುದರಿಂದ ಹಾಗೂ ವಸತಿಗೆ ಸಾಕಷ್ಟು ಬೇಡಿಕೆ ಇರುವುದರಿಂದ ಮಂಡಳಿಗೆ ಯಾವುದೇ ಆರ್ಥಿಕ ಭಾರವಿಲ್ಲದೇ ಮೆ: ಏಂಜಲ್ ಎ.ವಿ. ಅಸೋಸಿಯೇಟ್ಸ್ ಬಿಲ್ಡರ್ಸ್ ಅಂಡ್ ಡೆವಲಪರ್ಸ್, ಬೆಂಗಳೂರು. ಇವರೊಂದಿಗೆ ಮಾರ್ಕೆಟಿಂಗ್ ಸಹಭಾಗಿತ್ವದ ವಸತಿ ಯೋಜನೆ ಮತ್ತು ನಿಯಮಗಳಡಿಯಲ್ಲಿ ಪರಿಗಣಿಸಲು ತೀರ್ಮಾನಿಸಿರುವುದಾಗಿ ತಿಳಿಸಿದ್ದಾರೆ. ಆದುದರಿಂದ, ಕರ್ನಾಟಕ ಗೃಹ ಮಂಡಳಿಯು ದಿನಾಂಕ: 21/07/2010ರ ಮಂಡಳಿ ಸಭೆಯಲ್ಲಿ ಕೈಗೊಂಡಿರುವ ನಿರ್ಣಯದಂತೆ ಮೆ: ಏಂಜಲ್ ಎ.ವಿ. ಅಸೋಸಿಯೇಟ್ಸ್ ಬಿಲ್ಡರ್ಸ್ ಅಂಡ್ ಡೆವಲಪರ್ಸ್, ಬೆಂಗಳೂರು. ಇವರ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳಲು ಸದರಿಯವರೊಂದಿಗೆ ಒಪ್ಪಂದ ಮಾಡಿಕೊಳ್ಳಲು ಮತ್ತು ಜಮೀನುಗಳನ್ನು ಮಂಡಳಿಗೆ ಹಸ್ತಾಂತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಮಂಡಳಿಯ ಆಯುಕ್ತರು ಕೋರಿದ್ದಾರೆ.

ಆಯುಕ್ತರು, ಕರ್ನಾಟಕ ಗೃಹ ಮಂಡಳಿ ರವರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ, ಈ ಕೆಳಕಂಡಂತೆ ಆದೇಶ ಹೊರಡಿಸಲು ನಿರ್ಣಯಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 336 ಕಗೃಮಂ 2011 ಬೆಂಗಳೂರು, ದಿನಾಂಕ: 23/09/2011.**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಕರ್ನಾಟಕ ಗೃಹ ಮಂಡಳಿಯು ಮೈಸೂರು ಜಿಲ್ಲೆ, ಇಲವಾಲ ಹೋಬಳಿ, ಯಲಚಹಳ್ಳಿ ಮತ್ತು ಮೇಗಳಾಪುರ ಗ್ರಾಮಗಳಲ್ಲಿ ಸುಮಾರು 200 ಎಕರೆ ಜಮೀನಿನಲ್ಲಿ ಮೆ: ಏಂಜಲ್ ಎ.ವಿ. ಅಸೋಸಿಯೇಟ್ಸ್ ಬಿಲ್ಡರ್ಸ್ ಅಂಡ್ ಡೆವಲಪರ್ಸ್, ಬೆಂಗಳೂರು. ರವರೊಂದಿಗೆ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಹಮ್ಮಿಕೊಳ್ಳುವ ಬಗ್ಗೆ ಒಪ್ಪಂದ ಮಾಡಿಕೊಳ್ಳಲು ಮತ್ತು ಜಮೀನುಗಳನ್ನು ಮಂಡಳಿಗೆ ಹಸ್ತಾಂತರಿಸಿಕೊಳ್ಳಲು ದಿನಾಂಕ: 21/07/2010ರ ಮಂಡಳಿ ಸಭೆಯ ವಿಷಯ ಸಂಖ್ಯೆ: 21ರಲ್ಲಿ ಕೈಗೊಂಡಿರುವ ನಿರ್ಣಯಕ್ಕೆ ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಪಾರ್ವತಿ**

ಪೀಠಾಧಿಕಾರಿ-3, ವಸತಿ ಇಲಾಖೆ

ಪಿ.ಆರ್. 2456

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಕೆ.ಟಿ. ಜ್ಯೋತಿ, ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಕುಡ್ಲೂರು, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಓ(2ಎ)/176/2010-11, ದಿನಾಂಕ: 26/05/2011.

**ಪ್ರಸ್ತಾವನೆ :**

ಡಾ॥ ಕೆ.ಟಿ. ಜ್ಯೋತಿ, ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಕುಡ್ಲೂರು, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 122 ಹೆಚ್‌ಎಸ್‌ಹೆಚ್ 2007 ದಿನಾಂಕ: 08/02/2008 ರ ಪ್ರಕಾರ ದಿನಾಂಕ: 27/02/2008 ರಂದು ಸೇವೆಗೆ ಸೇರಿದ್ದು, ವೈಯಕ್ತಿಕ ಕಾರಣಗಳಿಂದ ದಿನಾಂಕ: 01/01/2010 ರಿಂದ ಅನ್ವಯವಾಗುವಂತೆ ರಾಜೀನಾಮೆ ಸಲ್ಲಿಸಿರುತ್ತಾರೆ. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ವೈದ್ಯರು ಅನಧಿಕೃತ ಗೈರುಹಾಜರಿಯಾದ ದಿನಾಂಕ: 30/11/2009 ರಿಂದ ಅನ್ವಯಿಸುವಂತೆ ಇವರ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿದ್ದು, ವೈದ್ಯರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವೆಂದು ಹಾಗೂ ಇವರು ಬಾಂಡ್ ಅವಧಿಯಲ್ಲಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 230 ಹೆಚ್‌ಎಸ್‌ಹೆಚ್ 2011 ಬೆಂಗಳೂರು, ದಿನಾಂಕ: 11/08/2011.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಕೆ.ಟಿ. ಜ್ಯೋತಿ, ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಕುಡ್ಲೂರು, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ: 30/11/2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಿಕ್ಕೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

ಪಿ.ಆರ್. 2457

## ವಸತಿ ಸಚಿವಾಲಯ

**ವಿಷಯ :** 2011–12ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಎರಡನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ವಇ 06 ಕೊಮಂಲೆ 2011, ದಿನಾಂಕ: 23–06–2011

**2.** ಆಯುಕ್ತರು, ಕಕೊಅಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊಅಮ/ಲೆಪಶಾ/ಅನುದಾನ:2011–2012, ದಿನಾಂಕ: 17–08–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರಲ್ಲಿ 2011–12ನೇ ಸಾಲಿಗೆ ಮೊದಲನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ ಹಾಗೂ ಹುಡ್ಕೋ ಸಾಲದ ಮೇಲು ಉಸ್ತುವಾರಿ (ಯೋಜನೇತರ)ಗಾಗಿ ಒಟ್ಟು ರೂ.567.01 ಲಕ್ಷಗಳನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲಾಗಿದೆ. ಕ್ರಮ ಸಂಖ್ಯೆ(2)ರಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿರವರ ಪತ್ರದಲ್ಲಿ, 2011–12ನೇ ಸಾಲಿನ ಎರಡನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ.137.50 ಲಕ್ಷಗಳು, ಕೊಳಚೆ ಸುಧಾರಣೆ – ಸಹಾಯಧನ – ಯೋಜನೆಯಡಿ ರೂ.25.00 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿಗಾಗಿ ರೂ.346.92 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ.137.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ.421.62ಲಕ್ಷಗಳು ಒಟ್ಟು ರೂ. 559.12ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ವಿವಿಧ ಲೆಕ್ಕಶೀರ್ಷಿಕೆಗಳಡಿ ಎರಡನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 06 ಕೊಮಂಲೆ 2011, ಬೆಂಗಳೂರು, ದಿನಾಂಕ: 24/09/2011.**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2011–12ನೇ ಸಾಲಿಗೆ ಎರಡನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ ಹಾಗೂ ಹುಡ್ಕೋ ಸಾಲದ ಮೇಲು ಉಸ್ತುವಾರಿ (ಯೋಜನೇತರ)ಗಾಗಿ ಒಟ್ಟು ರೂ.559.12 ಲಕ್ಷಗಳು (ಐದು ಕೋಟಿ ಐವತ್ತೊಂಬತ್ತು ಲಕ್ಷ ಹನ್ನೆರಡು ಸಾವಿರ ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

ರೂ. ಲಕ್ಷಗಳಲ್ಲಿ

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಎರಡನೇ ತ್ರೈಮಾಸಿಕ | | |
|---|---|---|---|---|
| | | ಯೋಜನೆ | ಯೋಜನೇತರ | ಒಟ್ಟು |
| 1 | ಸಿಬ್ಬಂದಿ ವೆಚ್ಚ 2217–04–191–2–01 | 112.50 | 74.70 | 187.20 |
| 2 | ಕೊಳಚೆ ಸುಧಾರಣೆ ಸಹಾಯಧನ 2217–04–191–2–02 | 25.00 | 0.00 | 25.00 |
| 3 | ಹುಡ್ಕೋ ಸಾಲಗಳ ಮೇಲು ಉಸ್ತುವಾರಿ 2217–04–191–2–04 | 0.00 | 346.92 | 346.92 |
| **ಒಟ್ಟು** | | **137.50** | **421.62** | **559.12** |

ಈ ಅನುದಾನವನ್ನು ಈ ಕೆಳಕಂಡ ನಿಬಂಧನೆಗೊಳಪಟ್ಟು ಬಿಡುಗಡೆ ಗೊಳಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.

3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.

4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಎಫ್‌ಡಿ 486 ವೆಚ್ಚ–9/2011, ದಿನಾಂಕ: 19–09–2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

ಪಿ.ಆರ್. 2458

## ಕಂದಾಯ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆಯ ಬೈಲಹೊಂಗಲ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಕಂಇ 132 ಮುಸರ 2008, ದಿನಾಂಕ: 31/12/2008.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಬೆಳಗಾಂ ಜಿಲ್ಲೆಯ ಬೈಲಹೊಂಗಲ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡಂತೆ ರಚಿಸಿ ಆದೇಶಿಸಲಾಗಿರುತ್ತದೆ.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಬೈಲಹೊಂಗಲ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೆಳಗಾಂ ಜಿಲ್ಲೆ. | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಬೈಲಹೊಂಗಲ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಬೈಲಹೊಂಗಲ ತಾಲ್ಲೂಕು | ಸದಸ್ಯ– ಕಾರ್ಯದರ್ಶಿ |
| 5 | ಶ್ರೀ ಡಿ.ಜಿ. ವೆಂಕಟೇಶ್ ಬಿನ್ ಲೇ: ಗೋವಿಂದ ರಾವ್, ದೊಡ್ಡಮಧುರೆ, ಯಡಿಯೂರು ಹೋಬಳಿ (ಸಾಮಾನ್ಯ) | ಸದಸ್ಯರು |
| 6 | ಶ್ರೀಮತಿ ಪವಿತ್ರಾ ಕೋಂ ನಿತ್ಯಾನಂದ, ಚಿಕ್ಕೋನಹಳ್ಳಿ, ಹುಲಿಯೂರುದುರ್ಗ ತಾಲ್ಲೂಕು (ಮಹಿಳೆ) | ಸದಸ್ಯರು |
| 7 | ಶ್ರೀ ನಾರಾಯಣಪ್ಪ ಬಿನ್ ಕೆಂಚಪ್ಪ, ವಾಣಿಗೆರೆ ಕೊತ್ತಗೆರೆ ಹೋಬಳಿ (ಪರಿಶಿಷ್ಟ ಜಾತಿ) | ಸದಸ್ಯರು |
| 8 | ಶ್ರೀ ಚಿಕ್ಕಣ್ಣ ಬಿನ್ ದೊಡ್ಡಯ್ಯ, ಯಡಿಯೂರು, ಕುಣಿಗಲ್ (ಪರಿಶಿಷ್ಟ ಪಂಗಡ) | ಸದಸ್ಯರು |

ರಾಜ್ಯ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ– ಕರ್ನಾಟಕ, ಬೆಂಗಳೂರು ಇವರು ಸರ್ಕಾರದ ಆದೇಶ ಸಂಖ್ಯೆ: ಕಂಇ 132 ಮುಸರ 2008 ದಿನಾಂಕ 20–12–2008ರಲ್ಲಿ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನೇಮಕ ಮಾಡಿರುವುದನ್ನು ರದ್ದುಪಡಿಸಿ, ಈ ಕೆಳಕಂಡ 4 ಜನ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡುವಂತೆ ಕೋರಿರುತ್ತಾರೆ.

| | | |
|---|---|---|
| 1 | ಶ್ರೀ ಚಿನ್ನಪ್ಪ ಮುತ್ನಾಳ ಎಂ.ಕೆ. ಹುಬ್ಬಳ್ಳಿ (ಸಾಮಾನ್ಯ) | ಸದಸ್ಯರು |
| 2 | ಶ್ರೀಮತಿ ಅನ್ನಪೂರ್ಣ ಬಸವರಾಜ ಪುಟ್ಟಿ, ಸಂಪಗಾಂವ (ಮಹಿಳೆ) | ಸದಸ್ಯರು |
| 3 | ಶ್ರೀ ಮಾರುತಿ ದುರ್ಗಪ್ಪ ಕಲ್ಲವಡ್ಡರ, ಕಿತ್ತೂರ (ಪರಿಶಿಷ್ಟ ಜಾತಿ) | ಸದಸ್ಯರು |
| 4 | ಶ್ರೀ ಲಕ್ಷ್ಮಣ ಶೆದೆಪ್ಪ ಕಾರೆಪ್ಪನವರ, (ದಳಪತಿ) ಗಜಮಿನಾಳ (ಪರಿಶಿಷ್ಟ ಪಂಗಡ) | ಸದಸ್ಯರು |

ಈ ಕೋರಿಕೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 07 ಮುಸರ 2011 ಬೆಂಗಳೂರು, ದಿನಾಂಕ 21ನೇ ಸೆಪ್ಟೆಂಬರ್, 2011**

ಈಗಾಗಲೇ ಸರ್ಕಾರಿ ಆದೇಶ ಸಂಖ್ಯೆ: ಕಂಇ 132 ಮುಸರ 2008 ದಿನಾಂಕ 31–12–2008ರಲ್ಲಿ ರಚಿಸಲಾದ ಬೆಳಗಾಂ ಜಿಲ್ಲೆಯ ಬೈಲಹೊಂಗಲ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯಲ್ಲಿ ನೇಮಿಸಲಾದ ಅಧಿಕಾರೇತರ ಸದಸ್ಯರುಗಳನ್ನು ರದ್ದುಪಡಿಸಿ, ಸದರಿ ಸಮಿತಿಗೆ ಈ ಕೆಳಕಂಡ ಅಧಿಕಾರೇತರ ಸದಸ್ಯರನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಾಮನಿರ್ದೇಶನಗೊಳಿಸಿ ಸರ್ಕಾರವು ಆದೇಶಿಸಿದೆ.

| | | |
|---|---|---|
| 1 | ಶ್ರೀ ಚಿನ್ನಪ್ಪ ಮುತ್ನಾಳ ಎಂ.ಕೆ. ಹುಬ್ಬಳ್ಳಿ (ಸಾಮಾನ್ಯ) | ಸದಸ್ಯರು |
| 2 | ಶ್ರೀಮತಿ ಅನ್ನಪೂರ್ಣ ಬಸವರಾಜ ಪುಟ್ಟಿ, ಸಂಪಗಾಂವ (ಮಹಿಳೆ) | ಸದಸ್ಯರು |
| 3 | ಶ್ರೀ ಮಾರುತಿ ದುರ್ಗಪ್ಪ ಕಲ್ಲವಡ್ಡರ, ಕಿತ್ತೂರ (ಪರಿಶಿಷ್ಟ ಜಾತಿ) | ಸದಸ್ಯರು |
| 4 | ಶ್ರೀ ಲಕ್ಷ್ಮಣ ಶೆದೆಪ್ಪ ಕಾರೆಪ್ಪನವರ, ಗಜಮಿನಾಳ (ಪರಿಶಿಷ್ಟ ಪಂಗಡ) | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 2459

## COMMERCE AND INDUSTRIES SECRETARIAT

**Sub :-** Participation in 8th Annual India Investment Forum New York – reg.

**Read :-** Single file No. KUM/AD-2/US visit – HL Del/291/2011-12.

**Preamble:**

8th Annual India Forum is scheduled on 22nd & 23rd September, 2011 and is being organized by FICCI and Institutional investor Magazine. On 23rd September, 2011 they have scheduled the keynote address of Hon'ble Chief Minister Government of Karnataka in the above event. Participation in the event would help State Government in promoting the Global Investors Meet 2012 and help in attracting investors. Hence, the following delegation headed by Hon'ble Chief Minister is proposed to participate in the Annual India Forum which is scheduled on 22nd & 23rd September, 2011 at New York.

1. Hon'ble Chief Minister
2. Chief Secretary to Government
3. Principal Secretary to Hon'ble Chief Minister
4. O. S. D to Hon'ble Chief Minister Sri. Kempegowda
5. Officers from Karnataka Udyog Mitra – Sri. Mahesh JD KUM, Sri M.N. Pradeep Kumar, Assistant Director.

The tentative expenditure is estimated to be Rs. 42.00 lakhs which will be met under head of account "2852-80-800-0-46-(125) (Plan)" Commissioner. Industrial Development and Director of Industries and Commerce has requested to release this amount.

The proposal has been examined in detail and hence the following order.

**Government Order No: CI 208 SPI 2011, Bangalore, Dated: 29.09.2011**

In the circumstances explained in the preamble, Government is pleased to release Rs. 42.00 lakhs (Rs. Forty two lakhs only) for participation in 8th Annual India Investment Forum New York subject to submission of report and actual expenditure statement. This expenditure will be met under Head of Account "2852-80-800-0-46-(125) (Plan)" – 2011-12.

Commissioner for Industrial Development and Director of Industries and Commerce Dept., should obtain all the necessary clearances from the concerned authroties as per the existing rules & regulations, wherever necessary.

MD, KUM is authorised to draw the amount on payee's receipt duly countersigned by Commissioner for Industrial Development and Director of Industries and Commerce Dept.

This order is issued with the powers delegated to the Principal Secretaries/Secretaries to Government.

By Order and in the name of the Governor of Karnataka
**A.V. Srinivasa Dikshit**
Desk Officer (Technical Cell)
Commerce & Industries Department

PR No: 2460

## ಶಿಕ್ಷಣ ಸಚಿವಾಲಯ

**ವಿಷಯ :** ಪವಿತ್ರ ರಾಷ್ಟ್ರೀಯ ವಿದ್ಯಾಲಯ ಶಿಕ್ಷಣ ಸಂಸ್ಥೆ, ರಾಮನಗರ, ರಾಮನಗರ ಜಿಲ್ಲೆ ಈ ಸಂಸ್ಥೆಗೆ 2007–08ನೇ ಸಾಲಿನ 2ನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಇಡಿ : 196 : ಯೋಸಕಾ 2007, ದಿನಾಂಕ 30–05–2008.
2. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಎಫ್ 14–21/2007 –ಐಇಡಿಸಿ, ದಿನಾಂಕ: 31–03–2009.
3. ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತ ಭಾಷಾ ಶಾಲೆಗಳ ನಿರ್ದೇಶನಾಲಯ ಅವರ ಪತ್ರ ಸಂಖ್ಯೆ: ಎಂಸಿ 1 ಐಇಡಿ ತ 05/2008–09 ದಿನಾಂಕ: 08–03–2010.
4. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರ ಪತ್ರ ಸಂಖ್ಯೆ: ಎಂಸಿ 1ಐಇಡಿತ 05/2008–09 ದಿ: 05–09–2011

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪವಿತ್ರ ರಾಷ್ಟ್ರೀಯ ವಿದ್ಯಾಲಯ ಶಿಕ್ಷಣ ಸಂಸ್ಥೆಗೆ 2007–08ನೇ ಸಾಲಿನ ಮೊದಲನೇ ಕಂತಿನ ಅನುದಾನ ಬಿಡುಗಡೆ ಮಾಡಿ ಆದೇಶ ನೀಡಲಾಗಿತ್ತು.
2. ಮೇಲೆ (2)ರಲ್ಲಿ ಓದಲಾದ ಕೇಂದ್ರ ಸರ್ಕಾರದ ಪತ್ರದಲ್ಲಿ ಸಂಸ್ಥೆಗೆ 2007–08ನೇ ಸಾಲಿನ 2ನೇ ಕಂತಿನ ಅನುದಾನ ರೂ. 3,10,710/–ಗಳನ್ನು ಬಿಡುಗಡೆ ಮಾಡಿದೆ.
3. ಮೇಲೆ (3)ರಲ್ಲಿ ಓದಲಾದ ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತ ಭಾಷಾ ಶಾಲೆಗಳು, ಬೆಂಗಳೂರು ಇವರ ಪತ್ರದಲ್ಲಿ ಈ ಸಂಸ್ಥೆಯನ್ನು 2008–09ನೇ ಸಾಲಿಗೆ ಅನ್ವಯಿಸುವಂತೆ ಮಾತ್ರ ಕಪ್ಪು ಪಟ್ಟಿಗೆ ಸೇರಿಸಲಾಗಿರುತ್ತದೆ. ಸಂಸ್ಥೆಯು ಸಮನ್ವಯ ಶಿಕ್ಷಣ ಯೋಜನೆಯನ್ನು ಅನುಷ್ಠಾನಗೊಳಿಸಿರುವ ಬಗ್ಗೆ ಅನುದಾನಕ್ಕೆ ತಕ್ಕಂತೆ ಲೆಕ್ಕ ಪತ್ರ ನಿರ್ವಹಿಸಿರುವ ಬಗ್ಗೆ ಜಿಲ್ಲಾ ಉಪನಿರ್ದೇಶಕರು (ಆಡಳಿತ) ವರದಿ ಸಲ್ಲಿಸಿದ್ದು, ಸದರಿ ವರದಿಯ ಅನುಸಾರ ಸದರಿ ಸಂಸ್ಥೆಗೆ 2007–08ನೇ ಸಾಲಿನ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ.
4. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ(4)ರ ಪತ್ರದಲ್ಲಿ ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತ ಭಾಷಾ ಶಾಲೆಗಳು, ಬೆಂಗಳೂರುರವರು ಮೇಲೆ ಓದಲಾದ(3)ರ ಪ್ರಸ್ತಾವನೆಗೆ ಸಮ್ಮತಿ ನೀಡಿರುತ್ತಾರೆ.
5. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 41 ಎಂಸಿಡಿ 2008 ಬೆಂಗಳೂರು, ದಿನಾಂಕ: 23–09–2011.**

**(ಇಡಿ 46 ಸ್ಕೀಮರ (ಯುನಿಕ್), ದಿನಾಂಕ: 23–09–2011**

6. ಕೇಂದ್ರ ಸರ್ಕಾರದ ಪುರಸ್ಕೃತ ಯೋಜನೆಯಡಿಯಲ್ಲಿ ಅಂಗವಿಕಲ ಮಕ್ಕಳಿಗೆ ಸಮಗ್ರ ಶಿಕ್ಷಣ ನೀಡುವ ಕಾರ್ಯಕ್ರಮಕ್ಕೆ ಪವಿತ್ರ ರಾಷ್ಟ್ರೀಯ ವಿದ್ಯಾಲಯ ಶಿಕ್ಷಣ ಸಂಸ್ಥೆ, ರಾಮನಗರ, ರಾಮನಗರ ಜಿಲ್ಲೆ ಈ ಸಂಸ್ಥೆಗೆ 2007–08ನೇ ಸಾಲಿಗೆ ಎರಡನೇ ಕಂತಿನ ಅನುದಾನವಾದ ರೂ. 3,10,710–00 (ಮೂರು ಲಕ್ಷದ ಹತ್ತು ಸಾವಿರದ ಏಳನೂರಹತ್ತು ರೂಪಾಯಿಗಳು ಮಾತ್ರ) ಗಳ ವೆಚ್ಚವನ್ನು ಭರಿಸಲು ಅನುಬಂಧ–1ರಲ್ಲಿ ತೋರಿಸಿರುವಂತೆ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾ ಪಂಚಾಯತ್, ರಾಮನಗರ ಇವರಿಗೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಅನುಮೋದನೆ ನೀಡಿದೆ.
7. ವೆಚ್ಚ ಭರಿಸುವ ಮುನ್ನ ಈಗಾಗಲೇ ಸಂಬಂಧಿಸಿದ ಜಿಲ್ಲೆಯ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರುಗಳು ಸಲ್ಲಿಸಿರುವ 2007–08ನೇ ಸಾಲಿನ ತಪಾಸಣಾ ವರದಿಯನ್ನು ಪರಿಶೀಲಿಸಲು ಸೂಚಿಸಿದೆ.
8. ಜಿಲ್ಲೆ Link document ಹಣದಿಂದ ಈ ತಮ್ಮ ಕಾರ್ಯಕ್ಷೇತ್ರದಲ್ಲಿ ಬರುವ ಆಯಾ ಸ್ವಯಂ ಸೇವಾ ಸಂಸ್ಥೆಗಳಿಗೆ ಅನುಬಂಧ–1 ರಲ್ಲಿ ತೋರಿಸಿರುವಂತೆ ನಿಗದಿಪಡಿಸಿರುವ ಅನುದಾನವನ್ನು ಮಾತ್ರ ಬಿಡುಗಡೆ ಮಾಡಲು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರಿಗೆ ಅನುಮತಿ ನೀಡಲಾಗಿದೆ.
9. ಸದರಿ ಮೊತ್ತವನ್ನು ಡ್ರಾ ಮಾಡುವ ಹಾಗೂ ಬಿಡುಗಡೆ ಮಾಡುವ ಅಧಿಕಾರವನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ನೀಡಿದೆ. ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯವರಿಗೆ ವೇತನಗಳನ್ನು ಬ್ಯಾಂಕ್ ಮೂಲಕವೇ ಪಾವತಿಸುವುದನ್ನು ಖಚಿತಪಡಿಸಿಕೊಳ್ಳಲು ಸೂಚಿಸಿದೆ.
10. ಈ ಮೊತ್ತವನ್ನು ಜಿಲ್ಲೆ ವಲಯದಡಿ ನಿಗದಿಯಾಗಿರುವ ಲೆಕ್ಕ ಶೀರ್ಷಿಕೆ 2202–80–800–0–18 (ಯೋಜನೆ) (ಅಂಗವಿಕಲ ಮಕ್ಕಳಿಗೆ ಸಮಗ್ರ ಶಿಕ್ಷಣದ ಕೇಂದ್ರ ಪುರಸ್ಕೃತ ಯೋಜನೆ) ಅಡಿ ನಿಗದಿಯಾಗಿರುವ ಆಯವ್ಯಯದ ಮಿತಿಯೊಳಗೆ ಲಿಂಕ್ ಕೋಡ್ 2202–80–196–6–02 ಅಡಿಯಲ್ಲಿ ಭರಿಸತಕ್ಕದ್ದು.
11. ಈ ಆದೇಶವನ್ನು ಆರ್ಥಿಕ ಇಲಾಖೆಯ ಜಮಾ ದೃಢೀಕರಣ ಪತ್ರ ಸಂಖ್ಯೆ ಆಇ 359 ಎಫ್.ಆರ್.ಸಿ. 2009, ದಿನಾಂಕ: 03–04–2009 ಹಾಗೂ ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಶಿಇ 777 ಐಎಫ್ (ಬಿ&ಎ) 2010 ದಿನಾಂಕ: 06–04–2010 ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಯೋಜನೆ)

**ಅನುಬಂಧ–1**

ಸರ್ಕಾರಿ ಆದೇಶ ಸಂಖ್ಯೆ: ಇಡಿ 41 ಎಂಸಿಡಿ 2008 ಬೆಂಗಳೂರು, ದಿನಾಂಕ 23–09–2011

(ಇಡಿ 46 ಸ್ಕೀಮರ (ಯುನಿಕ್), ದಿನಾಂಕ: 23–09–2011

ಕೇಂದ್ರ ಪುರಸ್ಕೃತ ಯೋಜನೆಯಾದ ಅಂಗವಿಕಲ ಮಕ್ಕಳ ಸಮನ್ವಯ ಶಿಕ್ಷಣ ಯೋಜನೆಯಡಿ ಸ್ವಯಂ ಸೇವಾ ಸಂಸ್ಥೆಗಳಿಗೆ ಬಿಡುಗಡೆ ಮಾಡಿರುವ 2007–08ನೇ ಸಾಲಿನ 2ನೇ ಕಂತಿನ ಅನುದಾನದ ಜಿಲ್ಲೆಯ ವಿವರ:

(ರೂ. ಗಳಲ್ಲಿ)

| ಕ್ರ ಸಂ. | ಜಿಲ್ಲೆಯ ಹೆಸರು | ಬಿಡುಗಡೆ ಮಾಡುತ್ತಿರುವ 2ನೇ ಕಂತಿನ ಅನುದಾನ |
|---|---|---|
| 1 | ರಾಮನಗರ | 3,10,710 |

1. ರಾಮನಗರ ಜಿಲೆ: (ರೂ. ಗಳಲ್ಲಿ)

| ಕ್ರ ಸಂ. | ಸ್ವಯಂ ಸೇವಾ ಸಂಸ್ಥೆಯ ಹೆಸರು | ಬಿಡುಗಡೆ ಮಾಡುತ್ತಿರುವ 2ನೇ ಕಂತಿನ ಅನುದಾನ |
|---|---|---|
| 1 | ಪವಿತ್ರ ರಾಷ್ಟ್ರೀಯ ವಿದ್ಯಾಲಯ ಶಿಕ್ಷಣ ಸಂಸ್ಥೆ, ರಾಮನಗರ | 3,10,710 |

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಪಿ.ಆರ್. 2461

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಯೋಜನೆ)

## ಸಹಕಾರ ಸಚಿವಾಲಯ

**ವಿಷಯ** : ಶ್ರೀ ಚೌಡೇಶ್ವರಿ ಮಹಿಳಾ ಸಮಾಜ (ರಿ), ಮೈಸೂರು ಈ ಸಂಸ್ಥೆಗೆ ಆಡಳಿತಾಧಿಕಾರಿ ಬದಲಾವಣೆ ಹಾಗೂ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ** :ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಎಸ್/ಆರ್‌ಸಿಎಸ್/ಎಡಿಎಂ/250/ಎಸ್‌ಓಆರ್/2008–09 ದಿನಾಂಕ: 20/04/2011

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ : 20/04/2011 ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ಉಪ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಜಿಲ್ಲಾ ಪಂಚಾಯಿತಿ, ಮೈಸೂರು ರವರು ದಿನಾಂಕ: 20/10/2010 ರಂದು ಶ್ರೀ ಚೌಡೇಶ್ವರಿ ಮಹಿಳಾ ಸಮಾಜ (ರಿ), ಮೈಸೂರು ಈ ಸಂಸ್ಥೆಗೆ ಆಡಳಿತಾಧಿಕಾರಿಯ ಪ್ರಭಾರ ಪಡೆದುಕೊಂಡಿರುವುದಾಗಿ ತಿಳಿಸಿದ್ದು, ಆಡಳಿತಾಧಿಕಾರಿಯವರು ಆಡಳಿತ ಮಂಡಳಿಯನ್ನು ಪುನರ್ ರಚಿಸಲು ಕ್ರಮ ಜರುಗಿಸಬೇಕಾಗಿದ್ದು ಹಾಗೂ ಸದರಿ ಸಂಘದ ಆಡಳಿತಾಧಿಕಾರಿಯ ಅವಧಿಯೂ ಈಗಾಗಲೇ ಮುಗಿದಿರುವುದರಿಂದ, ದಿನಾಂಕ : 25/05/2008 ರಿಂದ ಈವರೆಗೆ ಹಾಗೂ ಮುಂದಿನ ಆರು ತಿಂಗಳ ಅವಧಿಗೆ ವಿಸ್ತರಿಸುವುದು ಅವಶ್ಯವಿರುವುದರಿಂದ, ಮುಂದಿನ ಆರು ತಿಂಗಳ ಅವಧಿಗೆ ಉಪ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಜಿಲ್ಲಾ ಪಂಚಾಯಿತ್, ಮೈಸೂರು ರವರನ್ನೇ ಮುಂದುವರೆಸಲು ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಜಿಲ್ಲೆ, ಮೈಸೂರು ರವರು ಶಿಫಾರಸ್ಸು ಮಾಡಿರುವುದಾಗಿ ವರದಿ ಮಾಡಿರುತ್ತಾರೆ.

ಮುಂದುವರೆದು, ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಜಿಲ್ಲೆ ಮೈಸೂರು ರವರ ಶಿಫಾರಸ್ಸನ್ನು ಪರಿಗಣಿಸಿ, ಮೇಲ್ಕಂಡ ಸಂಸ್ಥೆಯ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ : 25/05/2008 ರಿಂದ ಈವರೆಗೆ ಹಾಗೂ ಮುಂದಿನ ಆರು ತಿಂಗಳ ಅವಧಿಗೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಹಾಗೂ ಸದರಿ ಸಂಸ್ಥೆಯ ಆಡಳಿತಾಧಿಕಾರಿಯಾಗಿ ಉಪ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಜಿಲ್ಲಾ ಪಂಚಾಯಿತ್, ಮೈಸೂರು ರವರನ್ನೇ ಮುಂದುವರೆಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 107 ಸಸಂನೋ 2008, ಬೆಂಗಳೂರು, ದಿನಾಂಕ : 12–10–2011**

ಶ್ರೀ ಚೌಡೇಶ್ವರಿ ಮಹಿಳಾ ಸಮಾಜ (ರಿ), ಮೈಸೂರು ಈ ಸಂಸ್ಥೆಗೆ ದಿನಾಂಕ : 25/05/2008 ರಿಂದ ಈವರೆಗೆ ಹಾಗೂ ಮುಂದಿನ ಆರು ತಿಂಗಳ ವರೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(1)(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಿದೆ. ಅಲ್ಲದೇ ಸದರಿ ಸಂಸ್ಥೆಯ ಆಡಳಿತಾಧಿಕಾರಿಯಾಗಿ ಉಪ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಜಿಲ್ಲಾ ಪಂಚಾಯತ್, ಮೈಸೂರು ರವರನ್ನೇ ಮುಂದಿನ ಆರು (06) ತಿಂಗಳ ಅವಧಿಗೆ ಮುಂದುವರೆಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಚುನಾವಣೆ ಪ್ರಕ್ರಿಯೆ ಪೂರ್ಣಗೊಳಿಸಿ, ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ –2
ಸಹಕಾರ ಇಲಾಖೆ

ಪಿ.ಆರ್. 2462

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ ಎನ್,ಎಂ. ನೀಲಕಂಠ, ಕೆ.ಎ.ಎಸ್. (ಕಿರಿಯ ಶ್ರೇಣಿ) ಹಿಂದಿನ ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ಮತ್ತು ಶ್ರೀ ಟಿ. ತಿಪ್ಪಯ್ಯ, ಪ್ರಥಮ ದರ್ಜೆ ಸಹಾಯಕ, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು ಇವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ** : Additional Registrar of Enquiries-10 Karnataka Lokayukta ಇವರ ಪತ್ರ ಸಂಖ್ಯೆ: COMPT/UPLOK/BCD/183/2011/ARE-10, dt: 11-07-2011

**ಪ್ರಸ್ತಾವನೆ:**

ಅಪರ ನಿಬಂಧಕರು, ವಿಚಾರಣೆಗಳು–10, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದೊಂದಿಗೆ, ಶ್ರೀ ಎನ್,ಎಂ. ನೀಲಕಂಠ, ಕೆ.ಎ.ಎಸ್. (ಕಿರಿಯ ಶ್ರೇಣಿ) ಇವರು ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ಹುದ್ದೆಯಲ್ಲಿ ಮತ್ತು ಶ್ರೀ ಟಿ. ತಿಪ್ಪಯ್ಯ, ಇವರು ಪ್ರಥಮ ದರ್ಜೆ ಸಹಾಯಕ, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ , ಶ್ರೀ ಸಿ ತಮ್ಮಯ್ಯ ಬಿನ್ ಲೇಟ್ ಚಿಕ್ಕಣ್ಣ, ನಾಗದೇವನಹಳ್ಳಿ ಜ್ಞಾನಭಾರತಿ ಅಂಚೆ, ಕೆಂಗೇರಿ ಹೋಬಳಿ, ಬೆಂಗಳೂರು ಇವರಿಗೆ ಸೇರಿದ ನಾಗದೇವನಹಳ್ಳಿಯಲ್ಲಿನ ಸರ್ವೆ ನಂ 52/8 ಮತ್ತು 10/3 ರಲ್ಲಿನ ಭೂಸ್ವಾಧೀನಕ್ಕೆ ಒಳಪಟ್ಟ ಜಮೀನುಗಳನ್ನು ಭೂಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡುವ ಸಂಬಂಧವಾಗಿ ಅನುಕೂಲಕರವಾದ ವರದಿಯನ್ನು ಸರ್ಕಾರಕ್ಕೆ ಕಳುಹಿಸಲು ಇವರುಗಳು ಭೂ ಮಾಲೀಕರಿಂದ ಲಂಚ ಸ್ವೀಕರಿಸುತ್ತಿದ್ದಾಗ, ದಿನಾಂಕ: 16–09–10 ರಂದು ಲೋಕಾಯುಕ್ತ ಪೋಲೀಸರಿಗೆ ಸಿಕ್ಕಿಬಿದ್ದಿರುತ್ತಾರೆ. ಇವರುಗಳ ಈ ವರ್ತನೆಯ ಬಗ್ಗೆ ಕರ್ನಾಟಕ ಲೋಕಾಯುಕ್ತ, ಕಾಯ್ದೆಯ ಕಲಂ 7(2) ರಡಿ ಸ್ವಯಂಪ್ರೇರಿತ ತನಿಖೆ ನಡೆಸಿ, ಇವರುಗಳ ವರ್ತನೆಯು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ, 1966ರ ನಿಯ 3(1) ರ ರೀತ್ಯಾ ಸರ್ಕಾರಿ ನೌಕರರಿಗೆ ತರವಲ್ಲದ ದುರ್ನಡತೆಯಾಗಿದೆಯೆಂದೂ, ಇವರುಗಳ ವಿರುದ್ಧ ಶಿಸ್ತು ಕ್ರಮವನ್ನು ಪ್ರಾರಂಭಿಸಲು ಶಿಫಾರಸ್ಸು ಮಾಡುತ್ತಾ ಮತ್ತು ಈ ಶಿಸ್ತು ಕ್ರಮ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 14–ಎ ರೀತ್ಯಾ ಉಪ ಲೋಕಾಯುಕ್ತರ ಪ್ರಾಧಿಕಾರಕ್ಕೆ ವಹಿಸುವಂತೆ ಸನ್ಮಾನ್ಯ ಉಪ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 12 (3) ರಡಿ ಸಲ್ಲಿಸಿದ ವರದಿಯನ್ನು ಲಗತ್ತಿಸಿರುತ್ತಾರೆ.

ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನಂತೆ, ಶ್ರೀ ಎನ್.ಎಂ. ನೀಲಕಂಠ, ಕೆ.ಎ.ಎಸ್. (ಕಿರಿಯ ಶ್ರೇಣಿ) ಹಿಂದಿನ ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ಮತ್ತು ಶ್ರೀ ಟಿ. ತಿಪ್ಪಯ್ಯ, ಇವರು ಪ್ರಥಮ ದರ್ಜೆ ಸಹಾಯಕ, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು ಇವರುಗಳ ವಿರುದ್ಧದ ದುರ್ನಡತೆ ಆರೋಪದ ಬಗ್ಗೆ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಮತ್ತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 14-ಎ ರನ್ವಯ ಈ ಶಿಸ್ತು ಕ್ರಮದ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವಂತೆ ಮಾಡಲಾಗಿರುವ ಶಿಫಾರಸನ್ನು ಮತ್ತು ಸಂಬಂಧಿಸಿದ ದಾಖಲಾತಿ ಪ್ರತಿಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 032 ಕೆಇವಿ 2011, ಬೆಂಗಳೂರು, ದಿನಾಂಕ : 13-10-2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 14-ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಎನ್ .ಎಂ. ನೀಲಕಂಠ, ಕೆ.ಎ.ಎಸ್. (ಕಿರಿಯ ಶ್ರೇಣಿ) ಹಿಂದಿನ ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ಮತ್ತು ಶ್ರೀ ಟಿ. ತಿಪ್ಪಯ್ಯ, ಪ್ರಥಮ ದರ್ಜೆ ಸಹಾಯಕ, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು ಇವರುಗಳ ವಿರುದ್ಧ ಪ್ರಸ್ತಾವನೆಯಲ್ಲಿ ಹೇಳಲಾದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಜಂಟೀ ಇಲಾಖಾ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2463 ಸಿ.ಆ.ಸು. ಇಲಾಖೆ (ಸೇವೆಗಳು-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎನ್. ಸುಬ್ಬರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು - ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 42 ಕೆಇವಿ 2008, ದಿನಾಂಕ 13-08-2010.
2. ವಿಚಾರಣಾಧಿಕಾರಿರವರ ವರದಿ ದಿನಾಂಕ 14-09-2011.
3. ವಿಚಾರಣಾಧಿಕಾರಿ ರವರ ಮನವಿ ದಿನಾಂಕ 14-09-2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಂ.ವಿ. ವೇದಮೂರ್ತಿ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಿಂದಿನ ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಎಸಗಿರುವ ಕರ್ತವ್ಯ ಲೋಪ ಹಾಗೂ ದುರ್ನಡತೆಗೆ ಸಂಬಂಧಿಸಿದಂತೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಎನ್. ಸುಬ್ಬರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 14-09-2011 ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿರುವ ಸಂಬಂಧ ಗೌರವಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 42 ಕೆಇವಿ 2008 ಬೆಂಗಳೂರು, ದಿನಾಂಕ : 14ನೇ ಅಕ್ಟೋಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಎನ್. ಸುಬ್ಬರಾವ್ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಬೆಂಗಳೂರು ಇವರಿಗೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 07, ದಿನಾಂಕ 11-04-2008 ರನ್ವಯ ರೂ. 8,000/- (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಗೌರವಧನವನ್ನು ಹಾಗೂ ರೂ. 1,500/- (ಒಂದು ಸಾವಿರದ ಐನೂರು ರೂಪಾಯಿಗಳು ಮಾತ್ರ) ಗಳ ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2052-ಸಚಿವಾಲಯ-ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರ ಸಚಿವಾಲಯ-05-ಸಾಮಾನ್ಯ ವೆಚ್ಚಗಳ ರಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಎಂ. ವಾಸುದೇವಮೂರ್ತಿ

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2464 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2)

**ಕಂದಾಯ ಸಚಿವಾಲಯ**

**ವಿಷಯ :** ಧಾರ್ಮಿಕ ದತ್ತಿ ಇಲಾಖೆಯ ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಯ ಕಾರ್ಯಯೋಜನೆ ಜಾರಿಗೊಳಿಸುವ ಕುರಿತು ಮಾರ್ಗಸೂಚಿ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಕಂಇ 32 ಮುಇವಿ 2011 ದಿನಾಂಕ 04–07–2011.
2) ಸರ್ಕಾರದ ಆದೇಶ ಸಂಖ್ಯೆ: ಕಂಇ 32 ಮುಇವಿ 2011 ದಿನಾಂಕ 04–07–2011.
3) ಆಯುಕ್ತರು , ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಆರಾಧನಾ/ಸಿಆರ್/26/2010–11 ದಿನಾಂಕ: 19–07–2011.

**ಪ್ರಸ್ತಾವನೆ :**

ಸರ್ಕಾರವು 2011–11ನೇ ಸಾಲಿನಲ್ಲಿ ಮುಜರಾಯಿ ಇಲಾಖೆಯಲ್ಲಿ "ವಿಶೇಷ ಘಟಕ ಯೋಜನೆ" ಹಾಗೂ "ಗಿರಿಜನ ಉಪಯೋಜನೆ" ಗಳನ್ನು ಜಾರಿಗೊಳಿಸಿದೆ. ಇಲಾಖೆಗೆ ಇದೊಂದು ಹೊಸ ಯೋಜನೆಯಾಗಿವೆ.

ಈ ಯೋಜನೆಗಳ ಅನುಷ್ಠಾನಕ್ಕಾಗಿ ಇಲಾಖೆಗೆ ಲೆಕ್ಕಶೀರ್ಷಿಕೆ "2250–00–800–2–16–ವಿಶೇಷ ಘಟಕ ಯೋಜನೆ –422–(ಯೋಜನೆ)" ಅಡಿಯಲ್ಲಿ ರೂ. 838.40 ಲಕ್ಷಗಳನ್ನು ಹಾಗೂ "2250–00–800–2–16–ಗಿರಿಜನ ಉಪಯೋಜನೆ–423 (ಯೋಜನೆ)" ಅಡಿಯಲ್ಲಿ ರೂ. 324.40 ಲಕ್ಷಗಳನ್ನು ಒದಗಿಸಲಾಗಿರುತ್ತದೆ.

ಹೀಗೆ ಒದಗಿಸಲಾದ ಅನುದಾನದಲ್ಲಿ ಪ್ರಸ್ತಾಪಿತ ಯೋಜನೆಗಳನ್ನು ಜಾರಿಗೊಳಿಸಲು ಅನುವಾಗುವಂತೆ ಮೇಲೆ ಓದಲಾದ (1) ಮತ್ತು (2) ರ ಸರ್ಕಾರಿ ಆದೇಶಗಳಲ್ಲಿ ಕ್ರಮವಾಗಿ ರೂ. 279.00 ಲಕ್ಷಗಳನ್ನು (SCSP) ಹಾಗೂ ರೂ. 108.20 ಲಕ್ಷಗಳನ್ನು (TSP) ಧಾರ್ಮಿಕ ದತ್ತಿ ಆಯುಕ್ತರವರಿಗೆ ಮಂಜೂರು ಮಾಡಿದೆ. ಅಲ್ಲದೆ, ಮಂಜೂರು ಮಾಡಲಾದ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸಹ ಧಾರ್ಮಿಕ ದತ್ತಿ ಆಯುಕ್ತರವರಿಗೆ ಆದೇಶವನ್ನು ನೀಡಲಾಗಿರುತ್ತದೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ, ಧಾರ್ಮಿಕ ದತ್ತಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆಯ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ಕಾರ್ಯಯೋಜನೆಗಳನ್ನು ಜಾರಿಗೊಳಿಸುವ ಬಗ್ಗೆ ಕರಡು ಮಾರ್ಗಸೂಚಿಯನ್ನು ತಯಾರಿಸಿ, ಸದರಿ ಮಾರ್ಗಸೂಚಿಗೆ ಅನುಮೋದನೆ ನೀಡಬೇಕೆಂದು ಕೋರಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರವರ ಕೋರಿಕೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 189 ಮುಅಬಿ 2011 ಬೆಂಗಳೂರು, ದಿನಾಂಕ : 19ನೇ ಸೆಪ್ಟೆಂಬರ್ 2011**

2011–12ನೇ ಸಾಲಿನಲ್ಲಿ ಮುಜರಾಯಿ ಇಲಾಖೆಯ "ವಿಶೇಷ ಘಟಕ ಯೋಜನೆ" ಹಾಗೂ "ಗಿರಿಜನ ಉಪಯೋಜನೆ" ಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಅನುವಾಗುವಂತೆ ಈ ಆದೇಶದ ಅನುಬಂಧದಲ್ಲಿರುವ ಮಾರ್ಗಸೂಚಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಅನುಮೋದನೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ, (ಮುಜರಾಯಿ)

ಪಿ.ಆರ್. 2465

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕಂದಾಯ ಇಲಾಖೆಯಲ್ಲಿ ಹೊಸದಾಗಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ವಿಭಾಗವನ್ನು ಪೂರಕ ಸಿಬ್ಬಂದಿಯೊಂದಿಗೆ ಸೃಜಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಕಾರ್ಯದರ್ಶಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಕಂದಾಯ ಇಲಾಖೆ ಇವರ ಪತ್ರ ಸಂಖ್ಯೆ ಆರ್‌ಡಿ 97 ಎಂಆರ್‌ಆರ್ 2011, ದಿನಾಂಕ 13–09–2011.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 97 ಎಂಆರ್‌ಆರ್ 2011, ದಿನಾಂಕ 26–08–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಸರ್ಕಾರದ ಕಾರ್ಯದರ್ಶಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಕಂದಾಯ ಇಲಾಖೆ ಇವರು ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಜಮೀನಿನ ಹಕ್ಕು ದಾಖಲೆಗಳನ್ನು ಇಂಡೀಕರಣಗೊಳಿಸುವ ಸಲುವಾಗಿ ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರಶಿಫ್ ರೆಕಾರ್ಡ್ಸ್ ಎಂಬ ಹೊಸ ಯೋಜನೆಯನ್ನು ಪ್ರಾರಂಭಿಸಲಾಗಿದೆ. ಈ ಉದ್ದೇಶಕ್ಕಾಗಿ ಸಚಿವಾಲಯದ ಸಿ.ಆ.ಸು.ಇ. (ಇ–ಆಡಳಿತ) ವಿಭಾಗದ ಅಧೀನದಲ್ಲಿ ಹೊಸದಾಗಿ ಒಂದು ಕೋಶವನ್ನು ಪೂರಕ ಸಿಬ್ಬಂದಿಯೊಂದಿಗೆ ಸೃಜಿಸಲು ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಗೆ ಈಗಾಗಲೇ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 681/ವೆಚ್ಚ–7/2011, ದಿನಾಂಕ 01–08–2011 ರನ್ವಯ ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಎಫ್‌ಡಿ 681/ವೆಚ್ಚ–7–2011, ದಿನಾಂಕ 20–08–2011 ರನ್ವಯ ಸಹಮತಿ ಪಡೆದು ಮೇಲೆ ಓದಲಾದ (2)ರ ಆದೇಶದಲ್ಲಿ ಸಚಿವಾಲಯದ ಮಟ್ಟದಲ್ಲಿ ಮತ್ತು ಈ ವಿಭಾಗದ ಅಧೀನದಲ್ಲಿ ಕ್ಷೇತ್ರ ಮಟ್ಟದ ಶಾಖೆಗಳನ್ನು ಸೃಜಿಸಿ ಆದೇಶಿಸಲಾಗಿದೆ. ಸಚಿವಾಲಯಕ್ಕೆ ಸಂಬಂಧಿಸಿದಂತೆ ಸಿ.ಆ.ಸು. ಇಲಾಖೆಯ ವತಿಯಿಂದ ಶಾಖೆ/ಹುದ್ದೆಗಳ ಸೃಜನೆಯ ಆದೇಶ ಹೊರಡಿಸಿ ಸೃಜನೆಗೊಂಡ ಹುದ್ದೆಗಳನ್ನು ಭರ್ತಿ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 482 ಸಅಸೇ 2011 ಬೆಂಗಳೂರು, ದಿನಾಂಕ : 13ನೇ ಅಕ್ಟೋಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈಗಾಗಲೇ ಸರ್ಕಾರದ ಆದೇಶ ಸಂಖ್ಯೆ ಕಂಇ 97 ಎಂಆರ್‌ಆರ್ 2011, ದಿನಾಂಕ 26–08–2011ರಲ್ಲಿ ಕಂದಾಯ ಇಲಾಖೆಯ ಅಧೀನದಲ್ಲಿ ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್ ಎಂಬ ಹೊಸ ಶಾಖೆ/ಹುದ್ದೆಗಳನ್ನು ಸೃಜಿಸಿದ್ದು ಈ ಆದೇಶದನ್ವಯ ಸಚಿವಾಲಯಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಹುದ್ದೆ ಮತ್ತು ಶಾಖೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಎರಡು ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಅಥವಾ ಮುಂದಿನ ಆದೇಶದವರೆಗೆ ಸೃಜಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರದ ಅಪರ / ಜಂಟಿ / ಉಪ ಕಾರ್ಯದರ್ಶಿ ಹಾಗೂ ಪದನಿಮಿತ್ತ ನಿರ್ದೇಶಕರು (ಭೂಮಿ ಮತ್ತು ಯು.ಪಿ.ಓ.ಆರ್.) | 1 |
| 2. | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| 3. | ಶಾಖಾಧಿಕಾರಿ | 1 |
| 4. | ಹಿರಿಯ ಸಹಾಯಕ | 1 |
| 5. | ಸಹಾಯಕರು | 2 |
| 6. | ಕಿರಿಯ ಸಹಾಯಕ | 1 |
| 7. | ಶೀಘ್ರಲಿಪಿಗಾರರು | 2 |
| 8. | ಬೆರಳಚ್ಚುಗಾರರು | 1 |
| 9. | ಗ್ರೂಪ್–ಡಿ | 2 |
| | **ಒಟ್ಟು** | **12** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಪಿ. ಮೋಹನರಾಜ್**
ಸರ್ಕಾರದ ಉಪ ಕಾರ್ಯದರ್ಶಿ (ಸೇವೆಗಳು)
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

ಪಿ.ಆರ್. 2466

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎನ್.ಎಸ್. ಮಲ್ಲಯ್ಯ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸದುರ್ಗ ಇವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 845 ಪಿಪಿಇ 2005, ದಿನಾಂಕ 03–05–2006.
2) ಸರ್ಕಾರದ ಆದೇಶ ಸಂಖ್ಯೆ: ಒಇ 453 ಪಿಪಿಇ 2009, ದಿನಾಂಕ 10–02–2010.
3) ಸರ್ಕಾರದ ಆದೇಶ ಸಂಖ್ಯೆ: ಒಇ 261 ಪಿಪಿಇ 2010, ದಿನಾಂಕ 30–05–2011.
4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ: ಡಿಪಿಎನ್/ಸಿಶಾ–1/37/2008–09, ದಿನಾಂಕ: 01–08–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 03–05–2006ರ ಸರ್ಕಾರದ ಅಧಿಸೂಚನೆಯ ಕ್ರಮ ಸಂಖ್ಯೆ: 43 ರನ್ವಯ ಶ್ರೀ ಎನ್.ಎಸ್. ಮಲ್ಲಯ್ಯ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸದುರ್ಗ ಇವರು ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗೆ ನೇರ ನೇಮಕಾತಿ ಮೂಲಕ ನೇಮಕಗೊಂಡು, ದಿನಾಂಕ 16–05–2006ರ ಪೂವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 10–02–2010 ಸರ್ಕಾರದ ಆದೇಶದನ್ವಯ, ಎರಡು ವರ್ಷಗಳ ಪರಿವೀಕ್ಷಣಾ ಅವಧಿಯು ನಿಯಮಾನುಸಾರ ದಿನಾಂಕ 15–05–2008 ರಂದು ಎರಡು ವರ್ಷಗಳ ಪರಿವೀಕ್ಷಣಾವಧಿಯು ಮುಕ್ತಾಯಗೊಂಡಿದ್ದು, ಅಧಿಕಾರಿಯು ಸದರಿ ಅವಧಿಯಲ್ಲಿ ಹುದ್ದೆಗೆ ನಿಗದಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಒಂದಾದ ಜನರಲ್ ಲಾ ಭಾಗ–1, ಪತ್ರಿಕೆ–2ರಲ್ಲಿ ಉತ್ತೀರ್ಣತೆಯನ್ನು ಹೊಂದಿಲ್ಲದಿದ್ದರಿಂದ, ಮೊದಲ ಬಾರಿಗೆ ದಿನಾಂಕ 16–05–2008 ರಿಂದ 15–05–2010ರ ವರೆಗೆ ಮತ್ತು ಮೇಲೆ (3)ರಲ್ಲಿ ಓದಲಾದ ದಿನಾಂಕ 30–05–2011ರ ಸರ್ಕಾರದ ಆದೇಶದನ್ವಯ, ಎರಡನೇ ಬಾರಿಗೆ ದಿನಾಂಕ 16–05–2010 ರಿಂದ ದಿನಾಂಕ 15–05–2011ರ ವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದೆ.

ಮೇಲೆ (4)ರಲ್ಲಿ ಓದಲಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ದಿನಾಂಕ 01–08–2011ರ ಪತ್ರದಲ್ಲಿ ಶ್ರೀ ಎನ್.ಎಸ್. ಮಲ್ಲಯ್ಯರವರ ಪರಿವೀಕ್ಷಣಾ ಅವಧಿಯನ್ನು ಸದರಿ ಅಧಿಕಾರಿಯು ಹುದ್ದೆಗೆ ನಿಗಧಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ಜನರಲ್ ಲಾ ಭಾಗ–1, ಪತ್ರಿಕೆ–2ರಲ್ಲಿ ಸದರಿ ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣತೆ ಹೊಂದದೇ ಇದ್ದುದ್ದರಿಂದ, ಮೇಲೆ (2) ಮತ್ತು (3)ರಲ್ಲಿ ಓದಲಾದ ಸರ್ಕಾರದ ಆದೇಶಗಳನ್ವಯ ಮೊದಲ ಬಾರಿಗೆ ದಿನಾಂಕ 16–05–2008 ರಿಂದ 15–05–2010ರ ವರೆಗೆ ಮತ್ತು ಎರಡನೇ ಬಾರಿಗೆ ದಿನಾಂಕ 16–05–2010 ರಿಂದ ದಿನಾಂಕ 15–05–2011ರ ವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲಾಗಿದೆ. 2010ರ 2ನೇ ಅಧಿವೇಶನದಲ್ಲಿ ನಡೆದ ಇಲಾಖಾ ಪರೀಕ್ಷೆಯಲ್ಲಿ ಜನರಲ್ ಲಾ ಭಾಗ–1, ಪತ್ರಿಕೆ–2ರಲ್ಲಿ ಉತ್ತೀರ್ಣತೆಯನ್ನು ಹೊಂದಿರುತ್ತಾರೆ. ಸದರಿ ಪರೀಕ್ಷೆಗಳ ಫಲಿತಾಂಶವು ಕ್ರಮವಾಗಿ ದಿನಾಂಕ 03–12–2009ರಂದು ಮತ್ತು ದಿನಾಂಕ 14–04–2011 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿದ್ದು, ವಿಸ್ತರಿಸಿದ ಅವಧಿಯೊಳಗೆ ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣತೆಯನ್ನು ಹೊಂದಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ (ಸೇವೆ

ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರ ನಿಯಮ 5(5)ರನ್ವಯ, ಕನ್ನಡ ಭಾಷಾ ಪರೀಕ್ಷೆಯಿಂದ ವಿನಾಯಿತಿ ನೀಡಲಾಗಿದೆ. ಸದರಿಯವರು ಇಲ್ಲಿಯವರೆಗೂ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ. ಅವರ ಮೇಲೆ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಹಾಗೂ ಹೂಡುವ ಪ್ರಕರಣಗಳು ಇರುವುದಿಲ್ಲ. ಅವರ ವಿರುದ್ಧ ಯಾವುದೇ ಕ್ರಿಮಿನಲ್ ಪ್ರಕರಣ ದಾಖಲಾಗಿರುವುದಿಲ್ಲ. ಸದರಿ ಅಧಿಕಾರಿಯವರ 2006–07, 2007–08, 2008–09, 2009–10 ಮತ್ತು 2010–11ನೇ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಗಳಲ್ಲಿ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಆದ್ದರಿಂದ, ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5ರ ಉಪನಿಯಮ (1)ಎರ ಅನುಸಾರ ದಿನಾಂಕ 14–04–2011 ರಿಂದ ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಕಂಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 353 ಪಿಪಿಇ 2011 ಬೆಂಗಳೂರು, ದಿನಾಂಕ : 16ನೇ ಸೆಪ್ಟೆಂಬರ್ 2011**

ಮೇಲಿನ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಎನ್. ಎಸ್. ಮಲ್ಲಯ್ಯ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸದುರ್ಗ ಇವರು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನ್ವಯ ದಿನಾಂಕ 14–04–2011 ರಂದು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು 'ಬಿ')

ಪಿ.ಆರ್. 2467

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸಿದ್ದರಾಜು, ಸಿ.ಹೆಚ್.ಸಿ. ಶ್ರೀರಂಗಪಟ್ಟಣ ಪೊಲೀಸ್ ಠಾಣೆ ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ : ಸಿಬ್ಬಂದಿ(2)/ಪಿಆರ್/35/2010–11, ಓ.ಬಿ. ಸಂಖ್ಯೆ : 190/10–11, ದಿನಾಂಕ : 05–08–2010.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ : ಅಪೀಲು/36/2010–11, ಅ.ಪು.ಸಂ. 39/2010–11, ದಿನಾಂಕ : 30–10–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 04–03–2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)/92/2010–11, ದಿನಾಂಕ : 17–06–2011.

**ಪ್ರಸ್ತಾವನೆ :**

ಶ್ರೀ ಸಿದ್ದರಾಜು, ಸಿ.ಹೆಚ್.ಸಿ. ಇವರು ಶ್ರೀರಂಗಪಟ್ಟಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕರ್ತವ್ಯ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

> "ಶ್ರೀ ಸಿದ್ದರಾಜು, ಸಿಹೆಚ್‌ಸಿ–84 ಆದ ನೀವು ಶ್ರೀರಂಗಪಟ್ಟಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಶ್ರೀರಂಗಪಟ್ಟಣ ತಾಲ್ಲೂಕು ಪಿ.ಹೊಸಹಳ್ಳಿ ಗ್ರಾಮದ ಭರತ ರಾಜ್ ರವರ ಹೆಂಡತಿ ಶ್ರೀಮತಿ ಸುನೀತ ರವರು ದಿನಾಂಕ : 24–05–2010 ರಂದು ಬೆಳಿಗ್ಗೆ 11–00 ಗಂಟೆಯಲ್ಲಿ ಶ್ರೀರಂಗಪಟ್ಟಣ ಪೊಲೀಸ್ ಠಾಣೆಗೆ ಹಾಜರಾಗಿ ತನ್ನ ಗಂಡ ಭರತ್‌ರಾಜ್‌ರವರು ಹೊಡೆದು ಗಲಾಟೆ ಮಾಡಿರುವ ಸಂಬಂಧ ದೂರು ಕೊಡಲು ಬಂದಿದ್ದು, ಮಧ್ಯಾಹ್ನ 01–40 ಗಂಟೆಯವರೆಗೂ ಠಾಣೆಯಲ್ಲಿ ಇದ್ದರೂ ಸಹ ಪ್ರಭಾರದಲ್ಲಿದ್ದರೂ ಸಹ ನೀವು ಶ್ರೀಮತಿ ಸುನೀತರವರಿಂದ ದೂರನ್ನು ಸ್ವೀಕರಿಸದೆ ಬೇರೆ ಮುಖ್ಯ ಪೇದೆ ಬರುತ್ತಾರೆ ಅವರಿಗೆ ದೂರನ್ನು ಕೊಡಿ ಎಂದು ಅನಗತ್ಯವಾಗಿ ಠಾಣೆಯಲ್ಲಿ ಕಾಯಿಸಿ, ದೂರನ್ನು ಸ್ವೀಕರಿಸದ ಕಾರಣ ಅರ್ಜಿದಾರರಾದ ಶ್ರೀಮತಿ ಸುನೀತ ರವರು ಮಾನ್ಯ ಐಜಿಪಿ, ದಕ್ಷಿಣ ವಲಯ, ಮೈಸೂರು ರವರನ್ನು ಭೇಟಿ ಮಾಡಿ ದೂರನ್ನು ನೀಡಿದ್ದು, ಈ ದೂರಿನನ್ವಯ ಶ್ರೀರಂಗಪಟ್ಟಣ ಪೊಲೀಸ್ ಠಾಣೆ ಮೊ.ಸಂ. 254/2010 ಕಲಂ 323, 498(ಎ), 506 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿರುತ್ತದೆ. ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿದ್ದು, ಶ್ರೀಮತಿ ಸುನೀತ ರವರಿಂದ ದೂರನ್ನು ಸ್ವೀಕರಿಸಿ ಪ್ರಕರಣ ದಾಖಲು ಮಾಡಿ ಕಾನೂನು ರೀತಿಯ ಕ್ರಮ ಕೈಗೊಳ್ಳಲು ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ತೋರಿರುತ್ತೀರಿ".

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 05–08–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮೂರು ತಿಂಗಳ ಕಾಲ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಲಾಗಿದೆ. ದಿನಾಂಕ : 25–05–2010 ರಿಂದ 09–06–2010 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 30–10–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 22 ಪೊಸಿಅ 2011, ಬೆಂಗಳೂರು, ದಿನಾಂಕ : 24–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿದ್ದರಾಜು, ಸಿಹೆಚ್.ಸಿ., ಶ್ರೀರಂಗಪಟ್ಟಣ ಪೊಲೀಸ್ ಠಾಣೆ ಮಂಡ್ಯ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್ ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2468

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ರಾಮಬಾಬು, ಆರ್.ಎಸ್.ಐ., ಡಿ.ಎ.ಆರ್. ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಜಿಲ್ಲೆ, ಇವರ ಆದೇಶ ಸಂಖ್ಯೆ : ಪಿಆರ್/99/2009/ಡಿ.ಓ.ಬಿ. ಸಂಖ್ಯೆ : 923/2009, ದಿನಾಂಕ : 04–06–2009.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ : ಅಪೀಲು/25/ಈವ/2009/2137, ಅ.ಪು.ಸಂ. 684/ಈವ/09, ದಿನಾಂಕ : 02–11–2009.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 08–02–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)/85/2009–10, ದಿನಾಂಕ : 21–06–2011.

**ಪ್ರಸ್ತಾವನೆ :**

ಶ್ರೀ ರಾಮಬಾಬು, ಆರ್.ಎಸ್.ಐ., ಡಿ.ಎ.ಆರ್. ಗುಲ್ಬರ್ಗಾ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

> "ಶ್ರೀ ರಾಮಬಾಬು, ಆರ್.ಎಸ್.ಐ., ಡಿ.ಎ.ಆರ್. ಗುಲ್ಬರ್ಗಾ ಆದ ನೀವು ದಿನಾಂಕ : 28–01–2009 ರಂದು ರಾತ್ರಿ ಸುಮಾರು 11–30 ಗಂಟೆಗೆ ಸಿಂಡಿಕೇಟ್ ಬ್ಯಾಂಕ್ ಕ್ಯಾಶ್ ಎಸ್ಕಾರ್ಟ್ ಕರ್ತವ್ಯದ ಮೇಲೆ ಇದ್ದಾಗ ಶ್ರೀಮಂತ, ಎಪಿಸಿ–27, ಡಿಎಆರ್, ಗುಲ್ಬರ್ಗಾ ರವರಿಗೆ ಬೂಟಿನಿಂದ ಹೊಡೆದು ಶೂಟ್ ಮಾಡುತ್ತೇನೆ ಅಂತ ಮಾತನಾಡಿ ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 04–06–2009ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 02–11–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 25 ಪೊಸಿಅ 2010, ಬೆಂಗಳೂರು, ದಿನಾಂಕ : 24-09-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಮಬಾಬು, ಆರ್.ಎಸ್.ಐ., ಡಿ.ಎ.ಆರ್. ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್ ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2469

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಆರ್.ರಾಜೇಶ್, ಪಿ.ಐ. ಆಂತರಿಕ ಭದ್ರತೆ ವಿಭಾಗ ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಇವರ ಆದೇಶ ಸಂಖ್ಯೆ : ಸಿಬ್ಬಂದಿ(1)/ಪಿಆರ್/66/07, ಓ.ಬಿ. ಸಂಖ್ಯೆ : 275/08, ದಿನಾಂಕ : 06-12-2008.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ : ಅಪೀಲು/46/2008-09, ಓ.ಬಿ. ಸಂಖ್ಯೆ : 46/2008-09, ದಿನಾಂಕ : 11-03-2009.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 17-03-2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)1/2011-12, ದಿನಾಂಕ : 04-07-2011.

**ಪ್ರಸ್ತಾವನೆ :**

ಶ್ರೀ ಆರ್.ರಾಜೇಶ್, ಪಿ.ಐ. ಇವರು ಹಾಸನ ನಗರ ಸಂಚಾರಿ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ., ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

"ಶ್ರೀ ಆರ್.ರಾಜೇಶ್, ಪಿ.ಎಸ್.ಐ.-2, ಆಗಿ ಟ್ರಾಫಿಕ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ಪೊಲೀಸ್ ಉಪಾಧೀಕ್ಷಕರು, ಹಾಸನ ಉಪವಿಭಾಗ, ಹಾಸನ, ಇವರು 2008ನೇ ಸಾಲಿನ ಸಂಚಾರಿ ಪೊಲೀಸ್ ಠಾಣೆಯ ವಾರ್ಷಿಕ ಪರಿವೀಕ್ಷಣೆ ಮಾಡಿದ್ದು, ಸಂಚಾರಿ ಪೊಲೀಸ್ ಠಾಣೆಯಲ್ಲಿ 102 ಪ್ರಕರಣಗಳು ತನಿಖೆಯ ಹಂತದಲ್ಲಿದ್ದು, ಅವುಗಳಲ್ಲಿ 5 ಪ್ರಕರಣಗಳು 2007ನೇ ಸಾಲಿನಲ್ಲಿ ವರದಿಯಾಗಿದ್ದು, ಉಳಿದ ಪ್ರಕರಣಗಳು 2009ನೇ ಸಾಲಿನಲ್ಲಿ ವರದಿಯಾಗಿರುತ್ತವೆ. ಒಟ್ಟು 102 ಪ್ರಕರಣಗಳಲ್ಲಿ ನಿಮ್ಮ ವಶದಲ್ಲಿ 2008ನೇ ಸಾಲಿನ 42 ಪ್ರಕರಣಗಳು ತನಿಖೆಯಲ್ಲಿದ್ದು, ಈ ಎಲ್ಲಾ ಪ್ರಕರಣಗಳಲ್ಲಿ ಆರೋಪಿಗಳು ಮತ್ತು ವಾಹನಗಳು ಪತ್ತೆಯಾಗಬೇಕೆಂದು ತಿಳಿಸಿರುತ್ತೀರಿ, ಈ ಎಲ್ಲಾ ಪ್ರಕರಣಗಳ ಕಡತಗಳನ್ನು ಪರಿಶೀಲಿಸಲಾಗಿ ಶೇಕಡ 80% ರಷ್ಟು ವಾಹನ ಹಾಸನ ಜಿಲ್ಲೆಯಲ್ಲಿ ನೊಂದಣಿಯಾಗಿರುವ ವಾಹನಗಳಾಗಿರುತ್ತವೆ. ಈ ವಾಹನಗಳ ಆರ.ಸಿ. ಮಾಲೀಕರ ಹೆಸರು, ವಿಳಾಸವನ್ನು ಸಂಬಂಧಪಟ್ಟ ಆರ.ಟಿ.ಓ. ಕಛೇರಿಯಿಂದ ಇದುವರೆಗೂ ಪಡೆದುಕೊಂಡಿರುವುದಿಲ್ಲ, ವಾಹನಗಳ ಪತ್ತೆಗಾಗಿ ಸಿಬ್ಬಂದಿಯವರುಗಳನ್ನು ನೇಮಿಸಿರುವ ಬಗ್ಗೆ ಯಾವುದೇ ವರದಿಗಳು ಇರುವುದಿಲ್ಲ. ಪ್ರಕರಣಗಳ ಕೇಸ್ ಡೈರಿಗಳನ್ನು ಪರಿಶೀಲನೆ ಮಾಡಲಾಗಿ ಜೂನ್ ಮತ್ತು ಜುಲೈ ತಿಂಗಳವರೆಗೆ ಮಾತ್ರ ಕೇಸ್ ಡೈರಿಗಳನ್ನು ಹದಿನೈದು ದಿವಸಕ್ಕೆ, ತಿಂಗಳಿಗೊಮ್ಮೆ ಬರೆದಿರುತ್ತೀರಿ. ತನಿಖೆಯ ಪ್ರಗತಿ ಬಹಳ ಶೋಚನೀಯ ಸ್ಥಿತಿಯಲ್ಲಿರುತ್ತದೆ. ನೀವು ಖುದ್ದಾಗಿ ಪ್ರಕರಣಗಳ ಕಡತಗಳನ್ನು ನೋಡದೆ, ನಿರ್ಲಕ್ಷತನದಿಂದ ತನಿಖೆಯನ್ನು ಮಾಡಿರುವುದು, ಸರಿಯಾಗಿ ತನಿಖೆಯನ್ನು ನಿರ್ವಹಿಸದೆ ಇರುವುದರಿಂದ ಹೆಚ್ಚಿನ ಪ್ರಕರಣಗಳಲ್ಲಿ ಆರೋಪಿಗಳು ಮತ್ತು ವಾಹನಗಳು ಪತ್ತೆಯಾಗಬೇಕಾಗಿದ್ದು, ತನಿಖೆಯ ಹಂತದಲ್ಲಿರುವುದು ಕಂಡುಬರುತ್ತದೆ. ನಿಮಗೆ ಸಾಕಷ್ಟು ಬಾರಿ ಪ್ರಕರಣಗಳ ವಿಲೇವಾರಿ ಮಾಡಲು ಸೂಕ್ತ ತಿಳುವಳಿಕೆಗಳನ್ನು ನೀಡಿದ್ದರೂ ಸಹ ಪ್ರಕರಣಗಳ ತನಿಖೆಯಲ್ಲಿ ಯಾವುದೇ ಪ್ರಗತಿಯನ್ನು ಕೈಗೊಂಡಿರುವುದು ಕಂಡುಬರುವುದಿಲ್ಲ. ನೀವು ಪ್ರಕರಣಗಳನ್ನು ತನಿಖೆ ಕೈಗೊಂಡು ವಿಲೇವಾರಿ ಮಾಡುವ ಬಗ್ಗೆ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷತನ ಪ್ರದರ್ಶಿಸಿರುತ್ತೀರಿ ಎಂದು ಡಿ.ಎಸ್.ಪಿ., ಹಾಸನ, ಇವರು ಉಲ್ಲೇಖದಲ್ಲಿ ಕಾಣಿಸಲಾದ ಅವರ ವರದಿಯಲ್ಲಿ ತಿಳಿಸಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 06-12-2008ರ ಆದೇಶದಲ್ಲಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಪಡೆಯುವ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ 2 ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 11-03-2009ರಲ್ಲಿ ತಿರಸ್ಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ

ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 29 ಪೊಸಿಅ 2011, ಬೆಂಗಳೂರು, ದಿನಾಂಕ : 24–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ರಾಜೇಶ್, ಪಿ.ಐ. ಆಂತರಿಕ ಭದ್ರತೆ ವಿಭಾಗ ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್ ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2470

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ನಾಗಭೂಷಣ, ಮಾಜಿ ಪಿ.ಸಿ.–2136, ಸದಾಶಿವನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಕೇಂದ್ರ ವಿಭಾಗ, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: ಡಿಇ/ಆರ್.6/9/ಡಿಸಿಪಿ/(ಕೇ)/2007 ದಿನಾಂಕ: 09–6–2010.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಅಪರ ಪೊಲೀಸ್ ಆಯುಕ್ತರು, (ಆಡಳಿತ) ಬೆಂಗಳೂರು, ಇವರ ಆದೇಶ ಸಂಖ್ಯೆ: 54/ಅಪೀಲು1/2010 ದಿನಾಂಕ: 04–12–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 15–02–11
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)/90/2010–11 ದಿನಾಂಕ: 20–6–2011.

**ಪ್ರಸ್ತಾವನೆ:**

ಶ್ರೀ ನಾಗಭೂಷಣ, ಇವರು ಬೆಂಗಳೂರಿನ ಸದಾಶಿವನಗರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್‌ಸ್ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

ದೋಷಾರೋಪಣೆ:

"ನೀವು ಪಿ.ಸಿ.–2136 ಶ್ರೀ ನಾಗಭೂಷಣ, ಸದಾಶಿವನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯವನ್ನು ಮಾಡುತ್ತಿದ್ದು, ದಿ: 08–10–2005 ರಂದು ಸದಾಶಿವನಗರ ಪೊಲೀಸ್ ಠಾಣೆಯಲ್ಲಿ ಹಾಜರಾಗಿ ದಿ: 04–10–05 ರಂದು ಮನೆ ಮೆಟ್ಟಿಲಿನಿಂದ ಆಕಸ್ಮಿಕವಾಗಿ ಜಾರಿ ಕೆಳಗೆ ಬಿದ್ದು, ಬೆನ್ನಿಗೆ ಮತ್ತು ದೇಹದ ಇತರೆ ಭಾಗಗಳಿಗೆ ಪೆಟ್ಟು ಬಿದ್ದಿದೆ ಎಂದು ಹೇಳಿ ಎಂ.ಹೆಚ್.ಎಸ್. ಪುಸ್ತಕವನ್ನು ಪಡೆದುಕೊಂಡು ಹೋಗಿರುತ್ತೀರಿ. ದಿನಾಂಕ: 04–10–2005 ರಿಂದ ಖಾಯಿಲೆ ರಜೆ ಎಂದು ಎಂ.ಹೆಚ್.ಎಸ್. ಪುಸ್ತಕವನ್ನು ಪಡೆದುಕೊಂಡು ಹೋದವರು ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗದೇ ರಜೆ ಅರ್ಜಿ ಸಲ್ಲಿಸದೇ ಗೈರುಹಾಜರಾಗಿರುತ್ತೀರಿ. ಎಂ.ಹೆಚ್.ಎಸ್. ಪಡೆದರೂ ಕಾಲಕಾಲಕ್ಕೆ ಸೂಕ್ತ ವೈದ್ಯಕೀಯ ಪ್ರಮಾಣ ಪತ್ರದೊಂದಿಗೆ ರಜೆ ಸಲ್ಲಿಸಿ ಮಂಜೂರಾತಿ ಪಡೆಯಬೇಕಾಗಿದ್ದು, ಹಾಗೆ ಮಾಡದೆ ಇದ್ದು, ಅಲ್ಲದೆ ಈ ಬಗ್ಗೆ ಸದಾಶಿವನಗರ ಪೊಲೀಸ್ ಠಾಣೆಯ ಪೊಲೀಸ್ ಇನ್‌ಸ್ಪೆಕ್ಟರ್ ರವರು ದಿ: 15–02–06 ಮತ್ತು 22–06–06 ರಂದು ನಿಮಗೆ ಜ್ಞಾಪನಗಳನ್ನು ನೀಡಿ ನಿಮ್ಮ ಖಾಯಿಲೆ ಬಗ್ಗೆ ತಿಳಿಸಲು ಕೋರಿದ್ದರೂ ಸಹ ನೀವುಗಳು ಸ್ವೀಕರಿಸಿ, ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಹಾಗೂ ನಿಮ್ಮ ಖಾಯಿಲೆ ಬಗ್ಗೆ ವೈದ್ಯರ ಪ್ರಮಾಣ ಪತ್ರವನ್ನು ಹಾಜರು ಮಾಡದೆ ಗೈರುಹಾಜರಿಯಲ್ಲೇ ಮುಂದುವರೆದು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಕೇಂದ್ರ ವಿಭಾಗ, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 09–6–2010ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, (ಆಡಳಿತ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 04–12–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ

ಅನಧಿಕೃತವಾಗಿ ಗೈರುಹಾಜರಾಗಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 18 ಪೊಸಿಅ 2011, ಬೆಂಗಳೂರು, ದಿನಾಂಕ : 03–10–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಾಗಭೂಷಣ, ಮಾಜಿ ಪಿ.ಸಿ.–2136, ಸದಾಶಿವನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2471

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಜಿ. ರಾಘವೇಂದ್ರ, ಪಿ.ಎಸ್.ಐ., ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಇವಿ/52/2008–09 (ಓ.ಬಿ. ಸಂಖ್ಯೆ: 29.2009–10) ದಿ: 24–3–2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(4)/43/2010–11 (ಓ.ಬಿ. ಸಂಖ್ಯೆ: 38/2010–11) ದಿನಾಂಕ: 30–01–11
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 20–4–11
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)/10/2011–12 ದಿನಾಂಕ: 24–6–2011.

**ಪ್ರಸ್ತಾವನೆ:**

ಶ್ರೀ ಬಿ.ಜಿ. ರಾಘವೇಂದ್ರ, ಪಿ.ಎಸ್.ಐ. ಇವರು ಸರಗೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿತನ ತೋರಿಸಿದ ಕಾರಣದ ಮೇಲೆ ಇತರೇ ಇಬ್ಬರು ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರೊಂದಿಗೆ 8 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

ದೋಷಾರೋಪಣೆ:

1. ಶ್ರೀ ಬಿ.ಜಿ. ರಾಘವೇಂದ್ರ, ಪಿ.ಎಸ್.ಐ., ಸರಗೂರು ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೀರಿ. ದಿನಾಂಕ: 08–01–09 ರಂದು ಒಂದು ದಿನದ ರಜೆ ಮೇಲೆ ತೆರಳಿದ್ದು ದಿ: 09–01–09 ರಂದು ಠಾಣಾ ಕರ್ತವ್ಯಕ್ಕೆ ಬಂದಿರುತ್ತೀರಿ. ಮುಳ್ಳೂರು ಗ್ರಾಮದಲ್ಲಿ ಕಳ್ಳತನವಾಗಿರುವ ಬಗ್ಗೆ, ಲಿಖಿತ ದೂರು ಬಂದಿದ್ದು, ಅದನ್ನು ಪರಿಶೀಲಿಸಿಕೊಂಡು ಬರಲು ಪ್ರೊಬೇಷನರಿ ಪಿ.ಎಸ್.ಐ. ಪುನೀತ್ ಹಾಗೂ ಪೇದೆ 434 ರವರೊಂದಿಗೆ ಕಳುಹಿಸಿಕೊಟ್ಟಿದ್ದು, ಪುನೀತ್‌ರವರು ವಾಪಸ್ಸು ಬಂದು ಕಳ್ಳತನವಾಗಿರುವ ಬಗ್ಗೆ ತಿಳಿಸಿರುತ್ತಾರೆ. ಸಿ.ಪಿ.ಸಿ. 434, ರವರು ಇದುವರೆವಿಗೂ ವಾಪಸ್ಸು ಬಂದಿಲ್ಲವೆಂದು, ಲಿಖಿತ ದೂರನ್ನು ನೀಡಿಲ್ಲವೆಂದು ಎಸ್.ಎಚ್.ಓ. ಬಾಲರಾಜ್ ಹೆಚ್.57, ರವರು ನಿಮಗೆ ತಿಳಿಸಿದರೂ ಸಹಾ ನೀವು ಯಾವುದೇ ಕ್ರಮ ಕೈಗೊಂಡಿಲ್ಲ, ಗ್ರಾಮಕ್ಕೆ ಭೇಟಿ ನೀಡಿ, ಕೃತ್ಯ ನಡೆದ ಸ್ಥಳದ ಪರಿಶೀಲನೆ ಮಾಡಿ, ಅರ್ಜಿದಾರರಿಂದ ಮಾಹಿತಿ/ಲಿಖಿತ ಹೇಳಿಕೆ ಮಾಡಿ, ಪ್ರಕರಣವನ್ನು ನೋಂದಾಯಿಸದೆ ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಉದಾಸೀನತೆ ತೋರಿರುತ್ತೀರಿ.
2. ನೀವು ದಿ: 13–01–09 ರಂದು ಸಿಪಿಸಿ–434 ರವರು ನಾಗರತ್ನಮ್ಮ ರವರ ದಿನಾಂಕ: 08–01–09 ರಂದು ನೀಡಿದ ಲಿಖಿತ ಅರ್ಜಿಯನ್ನು ಹಾಜರುಪಡಿಸಿದ ನಂತರ ಮೊಕದ್ದಮೆ ಸಂಖ್ಯೆ: 6/09, ಕಲಂ–454–457–380–ಐಪಿಸಿ, ಪ್ರಕರಣ ನೋಂದಾಯಿಸಿರುತ್ತೀರಿ. ದಿನಾಂಕ: 09–01–09 ರಿಂದ 12–01–09ರ ವರೆಗೆ ಕಳವು ಪ್ರಕರಣಕ್ಕೆ ಸಂಬಂಧಿಸಿದಂತೆ ಯಾವುದೇ ಕ್ರಮಕೈಗೊಳ್ಳದೆ ಕರ್ತವ್ಯಚ್ಯುತಿವೆಸಗಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಇವರ ವಿರುದ್ಧದ ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿಯನ್ನು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 24–3–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳು ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮವಾಗುವಂತೆ ಮುಂದೂಡಲಾಗಿದೆ. ದಿನಾಂಕ: 15–01–09 ರಿಂದ 04–02–09ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 30–01–11ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ

ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 44 ಪೊಸಿಅ 2011, ಬೆಂಗಳೂರು, ದಿನಾಂಕ : 03-10-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಜಿ., ರಾಘವೇಂದ್ರ, ಪಿ.ಎಸ್.ಐ., ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2472

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ನಂಜುಂಡೇಗೌಡ, ಪಿ.ಎಸ್.ಐ. ಬಾಣಾವರ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(1)/01/10-11 ದಿ: 30-7-2010.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/49/2010-11 (ಓ.ಬಿ. ಸಂಖ್ಯೆ 55/2010-11) ದಿನಾಂಕ: 03-02-2011.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 16-05-2011.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)/22/2011-12 ದಿನಾಂಕ: 11-8-2011.

**ಪ್ರಸ್ತಾವನೆ:**

ಶ್ರೀ ನಂಜುಂಡೇಗೌಡ, ಪೊಲೀಸ್ ಸಬ್ ಇನ್‌ಸ್ಪೆಕ್ಟರ್ ಇವರು ಬಾಣಾವರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ತರಹದ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

ದೋಷಾರೋಪಣೆ:

"ಶ್ರೀ ನಂಜುಂಡೇಗೌಡ, ಪಿ.ಎಸ್.ಐ. ಆದ ನೀವು ಬಾಣಾವರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ಬಾಣಾವರ ಠಾಣೆ ಮೊ.ಸಂ. 36/2010 ಕಲಂ 3,25,27 ಆಯುಧಗಳ ಅಧಿನಿಯಮ ಈ ಪ್ರಕರಣದಲ್ಲಿನ ಆರೋಪಿಯ ಎಂ.ಒ.ಬಿ. ಕಾರ್ಡನ್ನು ದಿನಾಂಕ: 23-3-2010ರ ಬೆಳಿಗ್ಗೆ 8-30ರೊಳಗೆ ಈ ಕಛೇರಿಗೆ ಕಳುಹಿಸುವಂತೆ ಪೊಲೀಸ್ ಅಧೀಕ್ಷಕರು, ಹಾಸನ ಇವರು ಖುದ್ದಾಗಿ ನಿಮಗೆ ದೂರವಾಣಿ ಮುಖಾಂತರ ಆದೇಶಿಸಿದ್ದರೂ ಸಹ ನೀವು ನಿಗದಿತ ಸಮಯದೊಳಗೆ ಸದರಿ ಎಂ.ಒ.ಬಿ. ಕಾರ್ಡನ್ನು ವಿಳಂಬವಾಗಿ ಸಲ್ಲಿಸಿದ್ದು, ಅಲ್ಲದೆ ಸದರಿ ಎಂ.ಒ.ಬಿ. ಕಾರ್ಡ್‌ನಲ್ಲಿ ಆರೋಪಿಯ ಭಾವಚಿತ್ರವನ್ನು ಲಗತ್ತಿಸದೇ ನಿಮ್ಮ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೆ ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷತನ ಪ್ರದರ್ಶಿಸಿ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ: 30-07-2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ 6 ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 03-02-2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 62 ಪೊಸಿಅ 2011, ಬೆಂಗಳೂರು, ದಿನಾಂಕ : 03-10-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಂಜುಂಡೇಗೌಡ, ಪಿ.ಎಸ್.ಐ., ಬಾಣಾವರ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2473

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ರಾಮನಗರ, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಬಿಡಿ–04/ಸಿಆರ್–02/2011, ರಾಮನಗರ, ದಿನಾಂಕ :21–7–2011.

2. ತನಿಖಾಧಿಕಾರಿಯವರ ಅಂತಿಮ ವರದಿ ದಿನಾಂಕ : 29–6–2011.

3. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ರಾಮನಗರ, ಇವರ ವಿರುದ್ಧ ಗುನ್ನೆ ಸಂಖ್ಯೆ : 02/2011 ರಲ್ಲಿ ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ರಾಮನಗರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ : (1)ರ ಪತ್ರ ದಿನಾಂಕ : 21–7–2011 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ದಿನಾಂಕ : 21–7–2011ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1) ಶ್ರೀ ಪಿ. ಶಿವಣ್ಣ ಬಿನ್ ಪುಟ್ಟಮಾದೇಗೌಡ, ವಯಸ್ಸು 32 ವರ್ಷ, ಗರಳಪುರ, ಸಂತೆಕೋಡಿಹಳ್ಳಿ ಅಂಚೆ, ಕೋಡಿಹಳ್ಳಿ ಹೋಬಳಿ, ಕನಕಪುರ ತಾ॥ ರಾಮನಗರ ಜಿಲ್ಲೆ, ಇವರ ದೂರು ದಿನಾಂಕ : 28–1–2011.
2) ಪ್ರಥಮ ವರ್ತಮಾನ ವರದಿ : ರಾಮನಗರ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣದ ಸಂಖ್ಯೆ : 02/2011.
3) ಪ್ರಾಯೋಗಿಕ ಪಂಚನಾಮೆ ದಿನಾಂಕ : 31–1–2011.
4) ಟ್ರ್ಯಾಪ್‌ನ ಮಹಜರ್ ದಿನಾಂಕ : 31–1–2011.
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ : ಕ.ಲೋ/ರಾವಿ/ಸಿ.ಆರ್.ಎಂ–02/2011 ರಾಮನಗರ
6) ಕೃತ್ಯ ನಡೆದ ಸ್ಥಳದ ನಕಾಶೆ :

1) **ಸಾಕ್ಷಿ ಹೇಳಿಕೆಗಳ ಪಟ್ಟಿ :**

1. ಶ್ರೀ ಪಿ. ಶಿವಣ್ಣ, ಫಿರ್ಯಾದುದಾರರು.
2. ಶ್ರೀ ಪದ್ಮನಾಭ, ಪ್ರ.ದ.ಸ. ಸಹಕಾರ ಇಲಾಖೆ, ರಾಮನಗರ.
3. ಶ್ರೀ ಬಿ. ಹರೀಶ್, ಪ್ರ.ದ.ಸ. ಸಹಕಾರ ಇಲಾಖೆ, ರಾಮನಗರ.
4. ಶ್ರೀ ಅನಂತರಾಜು, ಇನ್ಸ್‌ಪೆಕ್ಟರ್, ವಾಣಿಜ್ಯ ತೆರಿಗೆ ಅಧಿಕಾರಿ ಕಛೇರಿ, ರಾಮನಗರ.
5. ಶ್ರೀ ನಾಗೇಂದ್ರ, ಬೆರಳಚ್ಚುಗಾರ, ವಾಣಿಜ್ಯ ತೆರಿಗೆ ಅಧಿಕಾರಿ ಕಛೇರಿ, ರಾಮನಗರ.
6. ಶ್ರೀ ಜಗದೀಶ್ ಪ್ರಸಾದ್, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು.
7. ಶ್ರೀ ಮಲ್ಲಪ್ಪ, ವಾಣಿಜ್ಯ ತೆರಿಗೆ ಅಧಿಕಾರಿ, ಮೌಲ್ಯವರ್ಧಿತ ತೆರಿಗೆ ವಿಭಾಗ–2, ಮಲ್ಲೇಶ್ವರಂ, ಬೆಂಗಳೂರು
8. ಶ್ರೀ ಶ್ರೀನಿವಾಸ ರೆಡ್ಡಿ, ವಾಣಿಜ್ಯ ತೆರಿಗೆ ಅಧಿಕಾರಿ.
9. ಶ್ರೀ ಬಸವರಾಜಗೋವಿನದಾದ್, ಸಹಾಯಕ ರಾಸಾಯನಿಕ ತಜ್ಞರು.
10. ಶ್ರೀ ಕಾಶಿರಾಂ ಪವಾರ್, ಸಹಾಯಕ ನಿರ್ವಾಹಕ ಅಭಿಯಂತರರು, ಬೆಸ್ಕಾಂ ಇಲಾಖೆ, ರಾಮನಗರ ಉಪ ವಿಭಾಗ, ರಾಮನಗರ.
11. ಶ್ರೀ ವಿ. ಗೋವಿಂದರಾಜು, ಸಹಾಯಕ ಇಂಜಿನಿಯರ್, ನಂ. 1, ಉಪ ವಿಭಾಗ, ಲೋಕೋಪಯೋಗಿ ಉಪ ವಿಭಾಗ, ರಾಮನಗರ
12. ಶ್ರೀ ಎ.ವಿ. ಪ್ರಭುರಾಜೇ ಅರಸ್, ಪೊಲೀಸ್ ಮುಖ್ಯ ಪೇದೆ, ಕರ್ನಾಟಕ ಲೋಕಾಯುಕ್ತ, ರಾಮನಗರ ಜಿಲ್ಲೆ, ಪೊಲೀಸ್ ಠಾಣೆ, ರಾಮನಗರ.
13. ಶ್ರೀ ಎಸ್.ಬಿ. ಬೋರೇಗೌಡ, ಪೊಲೀಸ್ ಪೇದೆ, ಕರ್ನಾಟಕ ಲೋಕಾಯುಕ್ತ ಕಛೇರಿ, ಕರ್ನಾಟಕ ಲೋಕಾಯುಕ್ತ, ರಾಮನಗರ ವಿಭಾಗ, ರಾಮನಗರ.
14. ಶ್ರೀ ಹೆಚ್.ಕೆ. ಸುರೇಶ್, ಪೊಲೀಸ್ ಪೇದೆ, ಪೊಲೀಸ್ ಅಧೀಕ್ಷಕರವರ ಕಛೇರಿ, ಕರ್ನಾಟಕ ಲೋಕಾಯುಕ್ತ, ರಾಮನಗರ ವಿಭಾಗ, ರಾಮನಗರ.
15. ಶ್ರೀ ಕೆ. ಬೀರಯ್ಯ, ಪೊಲೀಸ್ ಪೇದೆ, ಕರ್ನಾಟಕ ಲೋಕಾಯುಕ್ತ, ರಾಮನಗರ ವಿಭಾಗ, ರಾಮನಗರ.
16. ಶ್ರೀ ಡಿ. ಕೃಷ್ಣಮೂರ್ತಿ, ಪೊಲೀಸ್ ಪೇದೆ, ಕರ್ನಾಟಕ ಲೋಕಾಯುಕ್ತ, ರಾಮನಗರ ವಿಭಾಗ, ರಾಮನಗರ.
17. ಶ್ರೀ ಸಣ್ಣತಮ್ಮಪ್ಪಯ್ಯ ಒಡೆಯರ್, ಪೊಲೀಸ್ ಇನ್ಸ್‌ಪೆಕ್ಟರ್, ರಾಮನಗರ ಜಿಲ್ಲೆ, ರಾಮನಗರ.

ಫಿರ್ಯಾದುದಾರರಾದ ಶ್ರೀ ಪಿ. ಶಿವಣ್ಣ ಬಿನ್. ಪುಟ್ಟಮಾದೇಗೌಡರವರು, ಗರಳಪುರ, ಸಂತೆಕೋಡಿ ಹಳ್ಳಿಯಲ್ಲಿ ಮಹದೇಶ್ವರ ಸ್ಟೀಲ್ ಅಂಡ್ ಹಾರ್ಡ್‌ವೇರ್ ಎಂಬ ಅಂಗಡಿಯನ್ನು ಇಟ್ಟುಕೊಂಡು ನಡೆಸುತ್ತಿದ್ದು, ಅಂಗಡಿಯ ವ್ಯಾಪಾರ ವಹಿವಾಟು ನಡೆಸಲು ಟಿನ್ ನಂಬರ್ ಅವಶ್ಯಕತೆ ಇದ್ದುದರಿಂದ ಫಿರ್ಯಾದುದಾರರು ಹೊಸ ನೋಂದಣಿ ಪತ್ರವನ್ನು ಪಡೆಯಲು ಅರ್ಜಿಯನ್ನು ಸಲ್ಲಿಸಿದ್ದು, ನಂತರ ದಿನಾಂಕ : 6–1–2011 ರಂದು ವಾಣಿಜ್ಯ ತೆರಿಗೆ ಇಲಾಖೆಗೆ ಹೋಗಿ, ವಾಣಿಜ್ಯ ತೆರಿಗೆ ಅಧಿಕಾರಿ ಶ್ರೀ ರಾಜಣ್ಣ, ಇವರನ್ನು ಭೇಟಿ ಮಾಡಿದಾಗ, ಹೊಸ ಕರಾರು ಪತ್ರವನ್ನು ಮಾಡಿಸಿಕೊಂಡು ಬನ್ನಿ ಎಂದು ತಿಳಿಸಿದ್ದು, ಅದರಂತೆ ಹೊಸ ಕರಾರು ಪತ್ರವನ್ನು ನೀಡಿ ದಿನಾಂಕ : 12–1–2011 ರಂದು ಒಟ್ಟು ರೂ. 4,525/– ಹಣವನ್ನು ಶುಲ್ಕವಾಗಿ ಪಾವತಿಸಿ ರಸೀದಿ ಪಡೆದಿರುವುದಾಗಿ ತಿಳಿಸಿರುತ್ತಾರೆ. ಫಿರ್ಯಾದುದಾರರು ದಿನಾಂಕ : 20–1–2011 ರಂದು ಶ್ರೀ ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿಯವರನ್ನು ಭೇಟಿಯಾಗಿ, ವಿಚಾರ ಮಾಡಿದಾಗ ನಿನ್ನ ನೋಂದಣಿ ಪತ್ರ ರೆಡಿಯಾಗಿದೆ. ರೂ. 3000/– ಕೊಟ್ಟು ನೋಂದಣಿ ಪತ್ರ ತೆಗೆದುಕೊಂಡು ಹೋಗುವಂತೆ ತಿಳಿಸಿದ್ದು, ಮತ್ತೆ ಫಿರ್ಯಾದುದಾರರು ಶ್ರೀ ರಾಜಣ್ಣ ವಾಣಿಜ್ಯ ತೆರಿಗೆ ಅಧಿಕಾರಿಯವರನ್ನು ಭೇಟಿ ಮಾಡಿ, ಅರ್ಜಿಯ ಬಗ್ಗೆ ವಿಚಾರ ಮಾಡಿದಾಗ, ಪಾಸ್‌ವರ್ಡ್ ಹಾಕುವ ಕೆಲಸವನ್ನು ಮಾಡಿಕೊಡುತ್ತೇನೆ ರೂ. 3000/– ತಂದುಕೊಡಿ ಎಂದು ನೋಂದಣಿ ಪತ್ರಕೊಟ್ಟು ಕಳುಹಿಸಿರುತ್ತಾರೆ. ಈ ಸಂಬಂಧ ಫಿರ್ಯಾದುದಾರರಿಗೆ ಲಂಚದ ಹಣವನ್ನು ಕೊಡಲು ಇಷ್ಟವಿಲ್ಲವಾದ್ದರಿಂದ ಸೂಕ್ತ ಕಾನೂನು ರೀತ್ಯ ಕ್ರಮಕ್ಕೆ ಕೋರಿರುತ್ತಾರೆ.

ಸದರಿ ದೂರನ್ನು ಆಧರಿಸಿ, ರಾಮನಗರ ಲೋಕಾಯುಕ್ತ ಪೊಲೀಸ್‌ರವರು ಆರೋಪಿ ಸರ್ಕಾರಿ ನೌಕರರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2)ರ ಪ್ರಕಾರ ರಾಮನಗರ ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ : 02/2011 ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ನಂತರ ಪಂಚ ಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ದಿನಾಂಕ : 31–1–2011 ರಂದು ಬೀಸಿದ ಬಲೆಯು ಯಶಸ್ವಿಯಾಗಿದ್ದು, ಸದರಿ ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ರಾಮನಗರ, ಇವರು ನೆರಳು ಸಾಕ್ಷಿದಾರರ ಸಮಕ್ಷಮ ಫಿರ್ಯಾದುದಾರರಿಂದ ಲಂಚದ ಹಣ ರೂ. 3000/–ನ್ನು ಆರೋಪಿತರು ಶ್ರೀ ಪ್ರಭುಸ್ವಾಮಿ ಅಟೆಂಡರ್ ಇವರ ಮೂಲಕ ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ, ಲೋಕಾಯುಕ್ತ ಪೊಲೀಸರು ವಶಪಡಿಸಿಕೊಂಡಿರುತ್ತಾರೆ. ನಡೆದ ಘಟನೆಯ ಬಗ್ಗೆ ಫಿರ್ಯಾದಿ ಮತ್ತು ನೆರಳು ಸಾಕ್ಷಿದಾರರು ತಮ್ಮ ಹೇಳಿಕೆಗಳಲ್ಲಿ ದೃಢಪಡಿಸಿರುತ್ತಾರೆ. ಸದರಿ ಆರೋಪಿತರನ್ನು ದಸ್ತಗಿರಿ, ಮಾಡಿ, ಘನ ನ್ಯಾಯಾಲಯದ ನ್ಯಾಯಾಧೀಶರ ಮುಂದೆ ಹಾಜರುಪಡಿಸಿರುತ್ತಾರೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಕೃತ್ಯನಡೆದ ಸ್ಥಳದ ನಕ್ಷೆ, ಆರೋಪಿತರ ಸೇವಾ ವಿವರಗಳು, ಸಾಕ್ಷಿದಾರರ ಹೇಳಿಕೆಗಳು ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಭೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988 ರ ಕಲಂ 7, 13(1) (ಡಿ) ರ ಜೊತೆಗೆ ಓದಲಾದ ಕಲಂ 13(2) ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7,13(1) (ಡಿ)ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿಯನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 7 ಮತ್ತು 13(1) (ಡಿ) ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 11 ವಾತೆತ 2011, ಬೆಂಗಳೂರು, ದಿನಾಂಕ : 3–10–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಆರ್. ಚಂದ್ರಶೇಖರಾರಾಧ್ಯ, ಪೀಠಾಧಿಕಾರಿ, ಆರ್ಥಿಕ ಇಲಾಖೆ, ವಾಣಿಜ್ಯ ತೆರಿಗೆ–2 ಶಾಖೆ ಆದ ನಾನು ಆಪಾದಿತ ಅಧಿಕಾರಿಯಾದ ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ರಾಮನಗರ, ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 18ರ ಪ್ರಕಾರ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ : 3–10–2011ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಆರ್. ಚಂದ್ರಶೇಖರಾರಾಧ್ಯ**

ಪಿ.ಆರ್. 2477

ಪೀಠಾಧಿಕಾರಿ,

ಆರ್ಥಿಕ ಇಲಾಖೆ. (ವಾಣಿಜ್ಯ ತೆರಿಗೆ–2).

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎ.ಎಂ. ಸೋಮಶೇಖರಯ್ಯ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ವ್ಯಾಟ್-270, ಮಂಗಳೂರು, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ :ಲೋಕ್/ಐಎನ್‌ವಿ(ಜಿ)/ಎಂ-08/ಸಿಆರ್-04/2011, ಮಂಗಳೂರು, ದಿನಾಂಕ :27-7-2011.
2. ತನಿಖಾಧಿಕಾರಿಯವರ ಅಂತಿಮ ವರದಿ ದಿನಾಂಕ : 1-7-2011.
3. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಶ್ರೀ ಎ.ಎಂ. ಸೋಮಶೇಖರಯ್ಯ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ವ್ಯಾಟ್-270, ಮಂಗಳೂರು, ಇವರ ವಿರುದ್ಧ ಗುನ್ನೆ ಸಂಖ್ಯೆ : 04/2011 ರಲ್ಲಿ ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಮಂಗಳೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ : (1)ರ ಪತ್ರ ದಿನಾಂಕ : 27-7-2011 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ದಿನಾಂಕ : 27-7-2011ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1) ಶ್ರೀ ಮನೋಜ್ ಸಲ್ದಾನ, ತಂದೆ : ಎಸ್. ಸಲ್ದಾನ ವಯಸ್ಸು 37 ವರ್ಷ, ನಂ. 25-21-1320/3(3), 'ಚಂದ್ರಮ್' ಜೆಪ್ಪು ಮಜಿಲ, ಕಂಕನಾಡಿ ಅಂಚೆ, ಮಂಗಳೂರು, ಇವರ ದೂರು ದಿನಾಂಕ : 8-2-2011.
2) ಪ್ರಥಮ ವರ್ತಮಾನ ವರದಿ : ಮಂಗಳೂರು ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣದ ಸಂಖ್ಯೆ : 04/2011.
3) ಪ್ರಾಯೋಗಿಕ ಪಂಚನಾಮೆ ದಿನಾಂಕ : 8-2-2011.
4) ಟ್ರ್ಯಾಪ್‌ನ ಮಹಜರ್ ದಿನಾಂಕ : 8-2-2011.
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ : ಎಂಆರ್‌ಎಲ್/ಎಲ್‌ಓಕೆ/32/2010-2011 ಮಂಗಳೂರು, ದಿನಾಂಕ : 25-2-2011.
6) ಕೃತ್ಯ ನಡೆದ ಸ್ಥಳದ ನಕಾಶೆ :

**1) ಸಾಕ್ಷಿ ಹೇಳಿಕೆಗಳ ಪಟ್ಟಿ :**

1. ಶ್ರೀ ಮನೋಜ್ ಸಲ್ದಾನ, ಫಿರ್ಯಾದುದಾರರು.
2. ಶ್ರೀ ಹೊನ್ನಪ್ಪಗೌಡ, ಪಿ. ಗ್ರಾಮಕರಣಿಕರು, ತಾಲ್ಲೂಕು ಕಛೇರಿ, ಮಂಗಳೂರು.
3. ಶ್ರೀ ದಾಮೋದರ, ಆರ್. ದ್ವಿದ.ಸ. ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳ ಕಛೇರಿ, ಮಂಗಳೂರು
4. ಶ್ರೀ ವೇಣು, ವಾಣಿಜ್ಯ ತೆರಿಗೆ ನಿರೀಕ್ಷಕರು, ವಾಣಿಜ್ಯ ತೆರಿಗೆ ಕಛೇರಿ-270, ಮಂಗಳೂರು.
5. ಶ್ರೀ ಶ್ರೀನಿವಾಸ, ವಾಣಿಜ್ಯ ತೆರಿಗೆ ಉಪ ಆಯುಕ್ತರು, (ಆಡಿಟ್-1) ಮಂಗಳೂರು.
6. ಶ್ರೀಮತಿ ಜಯಶ್ರೀ, ಗಂಡ : ರಾಜೇಶ್, ಪ್ರಜ್ಞಾ ಗಾಯತ್ರಿದೇವಿ ದೇವಸ್ಥಾನದ ಬಳಿ ಕಾರ್‌ಸ್ಟ್ರೀಟ್, ಮಂಗಳೂರು.
7. ಶ್ರೀ ನಿತಿನ್ ಕುಮಾರ್, ಬಿ.ಕೆ., ನಂ. 1-22-1734, ಕಲ್ಲಾವು ಬೋಳೂರು, ಉರ್ವಾ ಮಂಗಳೂರು.
8. ಶ್ರೀಮತಿ ಕುಶಲ, ಗಂಡ : ಉಮೇಶ್, ಫ್ಲಾಟ್ ನಂ.301, ರಾಜ್‌ಮಹಲ್ ಅಪಾರ್ಟ್‌ಮೆಂಟ್, ಲಾಲ್‌ಬಾಗ್, ಮಂಗಳೂರು.
9. ಶ್ರೀ ಎ.ಕೆ.ವೈ. ಸೈಯದ್, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು, (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ, ಮಂಗಳೂರು.
10. ಶ್ರೀ ಎಂ.ಹೆಚ್. ಶರೀಫ್, ಡೋರ್ ನಂ. 19-7-449/4, ಮಹಾಲಿಂಗೇಶ್ವರ ದೇವಸ್ಥಾನ ರಸ್ತೆ, ಪಾಂಡೇಶ್ವರ, ಮಂಗಳೂರು.
11. ಶ್ರೀ ರಾಜೇಶ್ ರೈ, ಸಹಾಯಕ ಇಂಜಿನಿಯರ್, ಜಲಸಾರಿಗೆ ಇಲಾಖೆ, ಮಂಗಳೂರು
12. ಶ್ರೀಮತಿ ಬಿ.ಸಿ. ಶೋಭ, ಸಹಾಯಕ ರಾಸಾಯನಿಕ ವಿಶ್ಲೇಷಕರು, ರಾಸಾಯನಿಕ ವಿಶ್ಲೇಷಕರ ಕಛೇರಿ, ಮಂಗಳೂರು.
13. ಶ್ರೀ ಶಾಂತಪ್ಪ, ಎಂ., ಹೆಚ್.ಸಿ. 1148, ಹೆಡ್ ಕಾನ್ಸ್‌ಸ್ಟೇಬಲ್, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
14. ಶ್ರೀ ಲಕ್ಷ್ಮೀಕಾಂತ, ಪಿ.ಸಿ. 1925, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
15. ಶ್ರೀ ಶಿವಪ್ರಸಾದ್, ಎಸ್.ವಿ., ಪಿ.ಸಿ.ನಂ. 594, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
16. ಶ್ರೀ ಶರತ್ ಚಂದ್ರ, ಪಿ.ಸಿ. ನಂ. 2121, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
17. ಶ್ರೀಮತಿ ಸುಮತಿ, ಮಹಿಳಾ ಪಿ.ಸಿ. 2261, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
18. ಶ್ರೀ ಸುದರ್ಶನ್ ಹೆಚ್.ಸಿ. 850, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
19. ಶ್ರೀ ಬಾಬು ಎ.ಪಿ.ಸಿ. 186, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
20. ಶ್ರೀ ಪ್ರಮೋದ್, ಎ.ಪಿ.ಸಿ., ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
21. ಶ್ರೀ ಲಕ್ಷ್ಮೀಕಾಂತ, ಎಸ್.ಎನ್. ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
22. ಶ್ರೀ ಉದಯಂ ನಾಯಕ್, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.
23. ಶ್ರೀ ಸದಾನಂದ ವರ್ಣೇಕರ್, ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.

24. ಶ್ರೀ ದಿಲೀಪ್ ಕುಮಾರ್, ಕೆ.ಹೆಚ್. ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು.

ಫಿರ್ಯಾದುದಾರರಾದ ಶ್ರೀ ಮನೋಜ್ ಸಲ್ಡಾನ ಬಿನ್. ಎಸ್. ಸಲ್ಡಾನ, ನಂ. 25–21–1320/3(3), 'ಚಂದ್ರಮ್' ಜೆಪ್ಪು ಮಜಿಲ, ಕಂಕನಾಡಿ ಅಂಚೆ, ಮಂಗಳೂರು, ಇವರು ಮಂಗಳೂರು ಲೋಕಾಯುಕ್ತ ಠಾಣೆಗೆ ಹಾಜರಾಗಿ ಲಂಚ ಕೇಳುತ್ತಿರುವ ಬಗ್ಗೆ ಮೌಖಿಕ ದೂರು ನೀಡಿದ್ದು, ಸದರಿ ದೂರನ್ನು ಖಚಿತಪಡಿಸಿಕೊಳ್ಳಲು ತನಿಖಾಧಿಕಾರಿಗಳು ಚಿಕ್ಕ ವಾಯ್ಸ್ ರೆಕಾರ್ಡರ್ ಕೊಟ್ಟು ಕಳುಹಿಸಿದ್ದು, ಸದರಿ ವಾಯ್ಸ್ ರೆಕಾರ್ಡರ್‌ನ್ನು ತೆಗೆದುಕೊಂಡು ಹೋದ ಫಿರ್ಯಾದಿಯು ದಿನಾಂಕ : 8–2–2011 ರಂದು ಮಂಗಳೂರು ಲೋಕಾಯುಕ್ತ ಠಾಣೆಗೆ ಹಾಜರಾಗಿ ನೀಡಿದ ದೂರಿನ ಸಾರಾಂಶವೇನೆಂದರೆ, ಫಿರ್ಯಾದುದಾರರು ತೆರಿಗೆ ಸಲಹೆಗಾರರಾಗಿ ಕೆಲಸ ಮಾಡುತ್ತಿದ್ದು, ಮಂಗಳೂರು ನಗರದ ಪಾಂಡೇಶ್ವರದಲ್ಲಿರುವ ಮೆ : ಇಎಸ್‌ಡಿವೈ ಬಿಲ್ಡರ್ಸ್‌ನ ವ್ಯಾಟ್ ನೋಂದಣಿ ಸಲುವಾಗಿ ಪವರ್ ಆಫ್ ಅಟಾರ್ನಿ ಪಡೆದುಕೊಂಡಿದ್ದಲ್ಲದೇ, ಈ ಸಂಬಂಧ ದಾಖಲೆಗಳನ್ನು ಮಾಡಿಸಿಕೊಡುವಂತೆ ಸದರಿ ಬಿಲ್ಡರ್ಸ್‌ರವರು ತಿಳಿಸಿದ್ದರಿಂದ ದಿನಾಂಕ : 24–1–2011 ರಂದು ವ್ಯಾಟ್ ಕಛೇರಿ–270, ವಾಣಿಜ್ಯ ತೆರಿಗೆ ಕಟ್ಟಡ, ಮಂಗಳೂರು, ಇಲ್ಲಿಗೆ ಅರ್ಜಿಯನ್ನು ಸಲ್ಲಿಸಿ, ನಿಗಧಿತ ಎನ್.ಎಸ್.ಸಿ. ಯನ್ನು ವ್ಯಾಟ್ ಕಛೇರಿಗೆ ನೀಡಿದ್ದು, ನಂತರ ಈ ಬಗ್ಗೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾದ ಶ್ರೀ ಸೋಮಶೇಖರಯ್ಯ, ಇವರನ್ನು ಭೇಟಿ ಮಾಡಿ ಟಿನ್ ನಂಬರ್ ನೀಡಲು ವಿಚಾರಿಸಿದಾಗ ಸದರಿ ಶ್ರೀ ಸೋಮಶೇಖರಯ್ಯನವರು ನನಗೆ ನೋಡಿಕೊಳ್ಳಬೇಕು, ನೋಡಿಕೊಂಡರೆ ಬೇಗ ಸಿಗುತ್ತದೆ ಎಂದು ಲಂಚಕ್ಕೆ ಒತ್ತಾಯಿಸಿದ್ದು, ಫಿರ್ಯಾದಿಗೆ ಲಂಚದ ಹಣ ಕೊಡಲು ಇಷ್ಟವಿಲ್ಲದ್ದರಿಂದ ಮಂಗಳೂರು ಲೋಕಾಯುಕ್ತ ಠಾಣೆಗೆ ಬಂದು ವಾಯ್ಸ್ ರೆಕಾರ್ಡರ್ ತೆಗೆದುಕೊಂಡು ಹೋಗಿ ಆರೋಪಿತರನ್ನು ಭೇಟಿ ಮಾಡಿ ವಿಚಾರಿಸಲಾಗಿ ಸದರಿ ಆರೋಪಿ ಶ್ರೀ ಸೋಮಶೇಖರಯ್ಯ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರು ರೂ. 2,000/– ಲಂಚಕ್ಕೆ ಒತ್ತಾಯಿಸಿದ ಬಗ್ಗೆ ತನ್ನ ಮತ್ತು ಆರೋಪಿತರ ನಡುವಿನ ಲಂಚದ ಬೇಡಿಕೆಯ ಸಂಭಾಷಣೆಯನ್ನು ವಾಯ್ಸ್ ರೆಕಾರ್ಡರಿನಲ್ಲಿ ಧ್ವನಿಮುದ್ರಿಸಿಕೊಂಡು ಬಂದು ಮಂಗಳೂರು ಲೋಕಾಯುಕ್ತ ಠಾಣೆಗೆ ಹಾಜರಾಗಿ ಸದರಿ ಆರೋಪಿತರ ವಿರುದ್ಧ ಸೂಕ್ತ ಕಾನೂನು ಕ್ರಮ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಸದರಿ ದೂರನ್ನು ಆಧರಿಸಿ, ಮಂಗಳೂರು ಲೋಕಾಯುಕ್ತ ಪೊಲೀಸ್‌ರವರು ಆರೋಪಿ ಸರ್ಕಾರಿ ನೌಕರರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2)ರ ಪ್ರಕಾರ ಮಂಗಳೂರು ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ : 04/2011 ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ನಂತರ ಪಂಚ ಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ದಿನಾಂಕ : 8–2–2011 ರಂದು ಬೀಸಿದ ಬಲೆಯು ಯಶಸ್ವಿಯಾಗಿದ್ದು, ಸದರಿ ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎ.ಎಂ. ಸೋಮಶೇಖರಯ್ಯ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಮಂಗಳೂರು, ಇವರು ನೆರಳು ಸಾಕ್ಷಿದಾರರ ಸಮಕ್ಷಮ ಫಿರ್ಯಾದುದಾರರಿಂದ ಲಂಚದ ಹಣ ರೂ. 2000/–ನ್ನು ಆರೋಪಿತರು ಶ್ರೀ ಮನೋಜ್ ಸಲ್ಡಾನ ಬಿನ್. ಎಸ್ ಸಲ್ಡಾನ, ಇವರಿಂದ ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ, ಲೋಕಾಯುಕ್ತ ಪೊಲೀಸರು ವಶಪಡಿಸಿಕೊಂಡಿರುತ್ತಾರೆ. ನಡೆದ ಘಟನೆಯ ಬಗ್ಗೆ ಫಿರ್ಯಾದಿ ಮತ್ತು ನೆರಳು ಸಾಕ್ಷಿದಾರರು ತಮ್ಮ ಹೇಳಿಕೆಗಳಲ್ಲಿ ದೃಢಪಡಿಸಿರುತ್ತಾರೆ. ಸದರಿ ಆರೋಪಿತರನ್ನು ದಸ್ತಗಿರಿ, ಮಾಡಿ, ಘನ ನ್ಯಾಯಾಲಯದ ನ್ಯಾಯಾಧೀಶರ ಮುಂದೆ ಹಾಜರುಪಡಿಸಿರುತ್ತಾರೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಕೃತ್ಯನಡೆದ ಸ್ಥಳದ ನಕ್ಷೆ, ಆರೋಪಿತರ ಸೇವಾ ವಿವರಗಳು, ಸಾಕ್ಷಿದಾರರ ಹೇಳಿಕೆಗಳು ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ಎ.ಎಂ. ಸೋಮಶೇಖರಯ್ಯ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಭೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988 ರ ಕಲಂ 7, 13(1) (ಡಿ) ರ ಜೊತೆಗೆ ಓದಲಾದ ಕಲಂ 13(2) ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7,13(1) (ಡಿ)ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಎ.ಎಂ. ಸೋಮಶೇಖರಯ್ಯ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಮಂಗಳೂರು, ಇವರನ್ನು ಲಂಚ ನಿರೋಧ ಕಾಯ್ದೆ 1988 ರ ಕಲಂ 7 ಮತ್ತು 13(1) (ಡಿ) ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 12 ವಾತೆತ 2011, ಬೆಂಗಳೂರು, ದಿನಾಂಕ : 3–10–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಆರ್. ಚಂದ್ರಶೇಖರಾರಾಧ್ಯ, ಪೀಠಾಧಿಕಾರಿ, ಆರ್ಥಿಕ ಇಲಾಖೆ, ವಾಣಿಜ್ಯ ತೆರಿಗೆ–2 ಶಾಖೆ ಆದ ನಾನು ಆಪಾದಿತ ಅಧಿಕಾರಿಯಾದ ಶ್ರೀ ಎ.ಎಂ. ಸೋಮಶೇಖರಯ್ಯ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಮಂಗಳೂರು, ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 18ರ ಪ್ರಕಾರ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ : 3–10–2011ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಆರ್. ಚಂದ್ರಶೇಖರಾರಾಧ್ಯ**

ಪಿ.ಆರ್. 2478

ಪೀಠಾಧಿಕಾರಿ,

ಆರ್ಥಿಕ ಇಲಾಖೆ. (ವಾಣಿಜ್ಯ ತೆರಿಗೆ–2).

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಲೋಕಾಯುಕ್ತ ಪೊಲೀಸರಿಗೆ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಂ–38/ಸಿಆರ್ 13/2010, ಮಂಗಳೂರು, ದಿನಾಂಕ 16–6–2011.

**ಪ್ರಸ್ತಾವನೆ :**

ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ 16–6–2011ರ ಪತ್ರದಲ್ಲಿ ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಉಪ ಖಜಾನೆ, ಪುತ್ತೂರು ಇವರು ಸೇವೆಯಲ್ಲಿದ್ದಾಗಲೇ ನಿಧನರಾದ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜು, ಕಡಬ, ಪುತ್ತೂರು ಇಲ್ಲಿಯ ವೃತ್ತಿ ಶಿಕ್ಷಕ ಶ್ರೀ ಗುರುರಾಜಪ್ಪ ಎಂಬುವವರ ನಿವೃತ್ತಿ ಸೌಲಭ್ಯಗಳ ಚೆಕ್‌ಗಳನ್ನು ಅವರ ವಾರಸುದಾರರಿಗೆ ನೀಡಲು ರೂ. 2500/–ಗಳ ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗಲೇ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದಿದ್ದು ಈ ಕಾರಣಕ್ಕಾಗಿ ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿದ್ದಾರೆ. ಲೋಕಾಯುಕ್ತರ ಪತ್ರದೊಂದಿಗೆ ಸಲ್ಲಿಸಲಾದ ತನಿಖಾ ವರದಿ, ಮಹಜರ್, ಪ್ರಥಮ ವರ್ತಮಾನ ವರದಿ, ಫಿನಾಫ್ತಲಿನ್ ಪರೀಕ್ಷೆ ಟ್ರಾಪ್ ಪೂರ್ವ ಮಹಜರು ಇತ್ಯಾದಿಗಳನ್ನು ಪರಿಶೀಲಿಸಲಾಯಿತು.

ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜು, ಕಡಬ ಇಲ್ಲಿ ವೃತ್ತಿ ಶಿಕ್ಷಕರಾಗಿದ್ದ ಶ್ರೀ ಗುರುರಾಜಪ್ಪ ಎಂಬುವವರು ದಿನಾಂಕ 16–8–2010ರಂದು ನಿಧನರಾಗಿದ್ದು, ಅವರ ಡಿ.ಸಿ.ಆರ್.ಜಿ. ಹಾಗೂ ಪ್ರಾವಿಡೆಂಟ್ ಫಂಡ್ ಹಣವನ್ನು ಅವರ ಪತ್ನಿ ಶ್ರೀಮತಿ ನಾಗರತ್ನ ಎಂಬುವವರು ಪಡೆಯುವ ಸಲುವಾಗಿ ಅವರ ಮಗ ಶ್ರೀ ಸಿ. ಜಿ. ಕೇಶವಮೂರ್ತಿ ಎಂಬುವವರು ಆರೋಪಿ ಶ್ರೀ ವಿ. ವೆಂಕಟರಮಣ ಅವರನ್ನು ಪುತ್ತೂರು ಉಪ ಖಜಾನೆಯಲ್ಲಿ ಸಂಪರ್ಕಿಸಿದ್ದಾರೆ. ಇದಕ್ಕೆ ಹಿಂದೆಯೇ ಮೃತರ ಸಾಮೂಹಿಕ ವಿಮೆ ಮೊಬಲಗು ರೂ. 1,20,000/– ಮೊತ್ತದ ಚೆಕ್ಕನ್ನು ಆರೋಪಿಯು ರೂ. 1500/–ಗಳ ಅಕ್ರಮ ಸಂಭಾವನೆ ಪಡೆದು ನೀಡಿರುತ್ತಾರೆ. ಅನಂತರ ಡಿ.ಸಿ.ಆರ್.ಜಿ. (ರೂ. 1,20,000/–), ಜಿ.ಪಿ.ಎಫ್. (ರೂ. 1,09,757/–) ಗಳ ಚೆಕ್ ಅನ್ನು ನೀಡಲು ಆರೋಪಿಯು ಅವರ ಕಚೇರಿಯ ಎರಡನೇ ದರ್ಜೆ ಸಹಾಯಕ ಶ್ರೀ ವಿಶ್ವನಾಥ ಪ್ರಭು ಎಂಬುವವರ ಮೂಲಕ ರೂ. 2,500/–ಗಳ ಬೇಡಿಕೆಯನ್ನು ಇಟ್ಟಿರುತ್ತಾರೆ. ಇದನ್ನು ಕೊಡಲು ಇಷ್ಟವಿಲ್ಲದ ಶ್ರೀ ಸಿ. ಜಿ. ಕೇಶವಮೂರ್ತಿ ಇವರು ದಿನಾಂಕ 13–12–2010ರಂದು ಲೋಕಾಯುಕ್ತರಿಗೆ ದೂರು ನೀಡಿರುತ್ತಾರೆ. ಟ್ರಾಪ್ ಪೂರ್ವ ಮಹಜರ್ ನಡೆದು ಅಂದೇ ಮಂಗಳೂರಿನಿಂದ ಪುತ್ತೂರಿಗೆ ತೆರಳಿದ ಲೋಕಾಯುಕ್ತ ಪೊಲೀಸರ ತಂಡವು ಆರೋಪಿ ಶ್ರೀ ವಿ. ವೆಂಕಟರಮಣ ಅವರಿಂದ ಟ್ರಾಪ್ ಪೂರ್ವ ಮಹಜರ್ ಸಂದರ್ಭದಲ್ಲಿ ಗುರುತಿಸಿ ಫಿನಾಫ್ತಲಿನ್ ಪೌಡರ್ ಲೇಪಿಸಿದ್ದ ರೂ. 500/– ಮುಖ ಬೆಲೆಯ 03 ನೋಟುಗಳು ಹಾಗೂ ರೂ. 1000/–ದ ಒಂದು ನೋಟನ್ನು ವಶಪಡಿಸಿಕೊಂಡಿತು. ಸದರಿ ನೋಟುಗಳ ಮೇಲಿನ ಸಂಖ್ಯೆಗಳು ಟ್ರಾಪ್ ಪೂರ್ವ ಮಹಜರ್‌ನಲ್ಲಿ ಗುರುತಿಸಿದ ಸಂಖ್ಯೆಗಳೊಡನೆ ಹೋಲಿಕೆಯಾಗುತ್ತದೆ. ಆರೋಪಿಯ ಕೈಗಳನ್ನು ಹಾಗೂ ಶರ್ಟ್‌ನ ಜೇಬನ್ನು ತೊಳೆದಾಗ ಅವು ಗುಲಾಬಿ ಬಣ್ಣಕ್ಕೆ ತಿರುಗಿವೆ. ಆನಂತರ ಮೃತರ ಕುಟುಂಬಕ್ಕೆ ನೀಡಬೇಕಾದ ನಿವೃತ್ತಿ ಸೌಲಭ್ಯಗಳ ಚೆಕ್‌ಗಳು ಎಲ್ಲಿವೆ ಎಂದು ಆರೋಪಿಯನ್ನು ಕೇಳಲಾಗಿ ಅವು ತನ್ನ ಕಚೇರಿಯ ಎರಡನೇ ದರ್ಜೆ ಸಹಾಯಕರಾದ ಶ್ರೀ ವಿಶ್ವನಾಥ ಪ್ರಭು ಎಂಬುವವರ ಬಳಿ ಇವೆ ಎಂದು ಹೇಳಿದ್ದಾರೆ. ಅವನ್ನು ಆಗಲೇ ಆರೋಪಿಯ ಸಮಕ್ಷಮದಲ್ಲಿ ಶ್ರೀ ವಿಶ್ವನಾಥ ಪ್ರಭು ಅವರು ಫಿರ್ಯಾದಿಯ ತಾಯಿಯವರಿಗೆ ನೀಡಿ ದಾಖಲೆಗಳನ್ನು ಸೂಕ್ತ ನಮೂದುಗಳಲ್ಲಿ ಮಾಡಿಕೊಂಡಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ದಾಖಲೆಗಳೊಡನೆ ಪರಿಶೀಲಿಸಿದ ಸರ್ಕಾರವು ಆರೋಪಿ ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರು ಸೇವೆಯಲ್ಲಿದ್ದಾಗಲೇ ನಿಧನರಾದ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜು, ಕಡಬ, ಪುತ್ತೂರು ಇಲ್ಲಿಯ ವೃತ್ತಿ ಶಿಕ್ಷಕ ಶ್ರೀ ಗುರುರಾಜಪ್ಪ ಎಂಬುವವರ ನಿವೃತ್ತಿ ಸೌಲಭ್ಯಗಳ ಚೆಕ್‌ಗಳನ್ನು ಅವರ ವಾರಸುದಾರರಿಗೆ ನೀಡಲು ರೂ. 2500/–ಗಳ ಅಕ್ರಮ ಸಂಭಾವನೆಯನ್ನು ಸ್ವೀಕರಿಸಿರುವ ಆರೋಪವು ದಾಖಲೆಗಳಿಂದಲೂ, ಮಹಜರುಗಳಿಂದಲೂ ಹಾಗೂ ರಾಸಾಯನಿಕ ಪರೀಕ್ಷೆಗಳಿಂದಲೂ ದೃಢಪಟ್ಟಿರುವುದನ್ನು ಮನಗಂಡು ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಸಾಕಷ್ಟು ಕಾರಣಗಳು ಇವೆ ಎಂದು ಭಾವಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 07 ಆಖಇ 2011, ಬೆಂಗಳೂರು, ದಿನಾಂಕ : 20–09–2011**

ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರ ವಿರುದ್ಧ ಅದೇ ಕಾಯ್ದೆಯ ಕಲಂ 7, 13(1)(ಡಿ) ರೊಂದಿಗೆ ಓದಿಕೊಂಡಂತೆ 13(2)ರ ಅಡಿಯಲ್ಲಿ ಎಸಗಿದ ಆರೋಪಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಮಂಜೂರಾತಿ ನೀಡುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ನಿಯಮ 19(1)ರನ್ವಯ ಈ ಆದೇಶವನ್ನು ನನ್ನ ಕಚೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ 20ನೇ ಸೆಪ್ಟೆಂಬರ್ 2011ರಂದು ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2479 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ :** ಸೇವೆಯಿಂದ ಅಮಾನತ್ತಿನಲ್ಲಿರುವ ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರ ಜೀವನಾಧಾರ ಭತ್ಯೆಯನ್ನು ಇತ್ಯರ್ಥ ಪಡಿಸುವ ಬಗ್ಗೆ.

**ಓದಲಾಗಿದೆ :** 1) ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಅವರ ಆದೇಶ ಸಂಖ್ಯೆ:ಖನಿ/ಶಿಶಾ17/ 2010-11, ದಿನಾಂಕ 22-12-2010.

2) ಸರ್ಕಾರಿ ಆದೇಶ ಸಂಖ್ಯೆ: ಆಇ 7 ಆಖಇ 2011, ದಿನಾಂಕ 7-2-2011

**ಪ್ರಸ್ತಾವನೆ :**

ಅಕ್ರಮ ಸಂಭಾವನೆ ಪಡೆಯುವಾಗಲೇ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿ ಬಿದ್ದ ಆರೋಪಕ್ಕಾಗಿ ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರನ್ನು ಉಲ್ಲೇಖ(1)ರ ಆದೇಶದಲ್ಲಿ ದಿನಾಂಕ 13-12-2010ರಿಂದಲೇ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಡಲಾಗಿದೆ. ಇದರಿಂದಾಗಿ ಅಧಿಕಾರಿಯ ಜೀವನಾಧಾರ ಭತ್ಯೆಯನ್ನು ಅಮಾನತ್ತಿನ 6 ತಿಂಗಳ ನಂತರದ ಅವಧಿಗೆ ನಿರ್ಧರಿಸುವುದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 07 ಆಖಇ 2011, ಬೆಂಗಳೂರು, ದಿನಾಂಕ 21-09-2011.**

ಸೇವೆಯಿಂದ ದಿನಾಂಕ 13-12-2010 ರಿಂದ ಅಮಾನತ್ತಿನಲ್ಲಿರುವ ಶ್ರೀ ವಿ. ವೆಂಕಟರಮಣ, ಉಪ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರಿಗೆ ನೀಡುತ್ತಿರುವ ಜೀವನಾಧಾರ ಭತ್ಯೆಯನ್ನು ಅಮಾನತ್ತಿನ 6 ತಿಂಗಳ ನಂತರವೂ ಸಹ ಶೇ. 50ರಷ್ಟೇ ಮೊತ್ತಕ್ಕೆ ಮಿತಿಗೊಳಿಸಬೇಕೆಂದು ಕೆ.ಸಿ.ಎಸ್.ಆರ್. ನಿಯಮ 98ರನ್ವಯ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

ಪಿ.ಆರ್. 2480

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಫ್.ಬಿ. ಚವ್ಹಾಣ್, ಡಿವೈ.ಎಸ್.ಪಿ. ರವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಒಇ 277 ಪೊಸಿಪ 2008 ದಿನಾಂಕ: 28-01-2009.
2. ಪೊಲೀಸ್ ಮಹಾ ನಿರ್ದೇಶಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ(5)18/2008-09 ದಿನಾಂಕ: 01-12-2010 ಮತ್ತು 20-01-2011.
3. ಸರ್ಕಾರದ ಪತ್ರ ಸಂಖ್ಯೆ: ಒಇ 277 ಪೊಸಿಪ 2008 ದಿನಾಂಕ: 28-05-2011.
4. ಶ್ರೀ ಎಫ್.ಬಿ. ಚವ್ಹಾಣ್, ಡಿ.ವೈ.ಎಸ್.ಪಿ. ರವರ ಸಮಜಾಯಿಷಿ ದಿನಾಂಕ: 30-06-2011.
5. ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಸಂಖ್ಯೆ: ಪಿಎಸ್‌ಸಿ 86 ಸಿಎನ್‌ಎಸ್ 2011 ದಿನಾಂಕ: 08-09-2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಫ್.ಬಿ. ಚವ್ಹಾಣ್, ಡಿ.ವೈ.ಎಸ್.ಪಿ. ರವರು ಶಾಲಾ ದಾಖಲಾತಿಗಳ ಪ್ರಕಾರ ಜನ್ಮ ದಿನಾಂಕ: 01-07-1952 ಆಗಿದ್ದು 05-11-1977 ರಲ್ಲಿ ಪಿ.ಎಸ್.ಐ. ಆಗಿ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರು 01-04-1998 – 31-03-1999 ರ ನಂತರದ ವರ್ಷಗಳಲ್ಲಿನ ವಾರ್ಷಿಕ ಕಾರ್ಯನಿರ್ವಾಹಣಾ ವರದಿಗಳಲ್ಲಿ ಜನ್ಮ ದಿನಾಂಕವನ್ನು 10-07-1954 ಎಂದು ತಿದ್ದುಪಡಿ ಮಾಡಿ ನಂತರದ ವರ್ಷಗಳಲ್ಲಿ 10-07-1954 ಎಂದು ಸ್ವತಃ ಸ್ಪಷ್ಟವಾಗಿ ನಮೂದಿಸಿಕೊಂಡು ಬಂದಿರುತ್ತಾರೆ. ಇದು ಸರ್ಕಾರಕ್ಕೆ ಮೋಸ ಮಾಡಲು ಮಾಡಿದ ಪ್ರಯತ್ನವಾಗಿದೆ ಹಾಗೂ ಇವರ ಸೇವಾ ಪುಸ್ತಕದಲ್ಲೂ ಸಹ ತಿದ್ದುಪಡಿ ಮಾಡಲು ಇವರೇ ಹೊಣೆಗಾರರಾಗಿರುತ್ತಾರೆಂದು ಸರ್ಕಾರದ ಸೇವೆಯಲ್ಲಿದ್ದು ಈ ರೀತಿ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿ ಸರ್ಕಾರಕ್ಕೆ ಮೋಸ ಮಾಡಲು ಪ್ರಯತ್ನಿಸಿರುವುದು ಕಂಡು ಬಂದಿರುವುದರಿಂದ ಇವರ ವಿರುದ್ಧ ಕೆ.ಎಸ್.ಪಿ. (ಡಿ.ಪಿ) ನಿಯಮಗಳು, 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಪ್ರಕರಣದಲ್ಲಿ ಪೊಲೀಸ್ ಆಯುಕ್ತರು ಹುಬ್ಬಳ್ಳಿ – ಧಾರವಾಡ ನಗರ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪೊಲೀಸ್ ಮಹಾ ನಿರ್ದೇಶಕರವರು ವಿಚಾರಣಾಧಿಕಾರಿಗಳಿಂದ ವರದಿಯನ್ನು ಪಡೆದು ಮುಂದಿನ ಕ್ರಮಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿನ ಆರೋಪಿತ ಅಧಿಕಾರಿಗಳಾದ ಶ್ರೀ ಎಫ್.ಬಿ. ಚವ್ಹಾಣ್‌ರವರು ಪೊಲೀಸ್ ಇಲಾಖೆಯಲ್ಲಿ ಉನ್ನತ ಹುದ್ದೆಯಲ್ಲಿರುವ ಹಿರಿಯ ಅಧಿಕಾರಿಗಳಾಗಿದ್ದು ತಮ್ಮ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ತಮ್ಮ ನಿಜವಾದ ಜನ್ಮ ದಿನಾಂಕ: 10-07-1952 ಆಗಿದ್ದರೂ ಸಹ ಇದನ್ನು ದಿನಾಂಕ: 10-7-1954 ಎಂದು ತಿದ್ದುಪಡಿ ಮಾಡಿ ತಮ್ಮ ಸೇವಾ ಅವಧಿಯ 9 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ತಪ್ಪು ಮಾಹಿತಿಯನ್ನು ನೀಡಿ ಸರ್ಕಾರಕ್ಕೆ ಮೋಸ ಮಾಡಲು ಪ್ರಯತ್ನಿಸಿ ದುರ್ನಡತೆ ಎಸಗಿರುವ ಆರೋಪಗಳು ವಿಚಾರಣಾ ವರದಿಯಲ್ಲಿ ಸಾಬೀತಾಗಿರುತ್ತದೆ ಎಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಅಧಿಕಾರಿಗಳಿಗೆ ನಿಯಮಾನುಸಾರ ದಂಡನೆ ವಿಧಿಸುವ ಮುನ್ನ ಎರಡನೇಯ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಅವರಿಂದ ನಿಗಧಿತ ಅವಧಿಯೊಳಗೆ ಸಮಜಾಯಿಷಿ ನೀಡುವಂತೆ ತಿಳಿಸಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಅಧಿಕಾರಿಗಳು ತಮ್ಮ ಸಮಜಾಯಿಷಿಯಲ್ಲಿ ತಾವು ತಮ್ಮ ಜನ್ಮ ದಿನಾಂಕವನ್ನು ತಿದ್ದುಪಡಿ ಮಾಡಲು ಹೊಣೆಗಾರರಾಗಿರುವುದಿಲ್ಲ. ತಮ್ಮ ಜನ್ಮ ಕುಂಡಲಿಯನುಸಾರ ತಮ್ಮ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ನೈಜ ಜನ್ಮ ದಿನಾಂಕವನ್ನು ನಮೂದಿಸಿರುವುದಾಗಿ ಈ ವಿಷಯವನ್ನು ವಿಚಾರಣೆಯ ಸಮಯದಲ್ಲಿ ವಿಚಾರಣಾಧಿಕಾರಿಗಳ ಗಮನಕ್ಕೆ ತಂದಿರುವುದಾಗಿ ಆದ್ದರಿಂದ ತಮ್ಮ ವಿರುದ್ಧದ ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ. ಅಧಿಕಾರಿಗಳ ಸಮಜಾಯಿಷಿಯನ್ನು ಪರಿಶೀಲಿಸಲಾಗಿದ್ದು. ಅಧಿಕಾರಿಗಳ ವಿರುದ್ಧ ಮಾಡಲಾಗಿರುವ

ಆರೋಪಕ್ಕೆ ಅಲ್ಲಗಳಿಯುವಂತಹ ಸಾಕ್ಷಿ/ದಾಖಲೆಗಳನ್ನು ಒದಗಿಸದೆ ಇರುವುದರಿಂದ ಅಧಿಕಾರಿಗಳ ಸಮಜಾಯಿಷಿಯನ್ನು ಪುರಸ್ಕರಿಸುವಂತಹ ಯಾವುದೇ ಕಾರಣಗಳು ಇರುವುದಿಲ್ಲ.

ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಅಧಿಕಾರಿಗಳಿಗೆ ದಂಡನೆ ವಿಧಿಸುವ ಮುನ್ನಾ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿ ಪ್ರಸ್ತಾವನೆಗೆ ಆಯೋಗವು ಸಹಮತಿ ನೀಡಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 277 ಪೊಸಿಪ 2008 ಬೆಂಗಳೂರು, ದಿನಾಂಕ: 30–09–2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಎಫ್.ಬಿ. ಚವ್ಹಾಣ್, ಡಿವೈಎಸ್.ಪಿ. (ಪ್ರಸ್ತುತ ಅಮಾನತ್ತಿನಲ್ಲಿರುವ) ಹಿಂದೆ ಧಾರವಾಡ ಉಪ ವಿಭಾಗ, ಧಾರವಾಡ ರವರ ವಿರುದ್ಧದ ಆರೋಪಗಳು ವಿಚಾರಣೆಯಲ್ಲಿ ಸಾಬೀತಾದ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 23(ಬಿ)(ii) ರನ್ವಯ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 2483

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಒಂಬುಡ್ಸ್‌ಮನ್‌ರವರ ಸಂಭಾವನೆಯನ್ನು ನಿಗದಿಪಡಿಸುವ ಕುರಿತು.

**ಓದಲಾಗಿದೆ:**
1. ಭಾರತ ಸರ್ಕಾರದ ಆದೇಶ ಸಂ. ಜೆ.11011/21/2008–ಎನ್‌ಆರ್‌ಇಜಿಎ ದಿನಾಂಕ: 07–09–2009.
2. ಮಾನ್ಯ ಸಚಿವರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ರವರ ಅಧ್ಯಕ್ಷತೆಯಲ್ಲಿ ದಿನಾಂಕ: 07–07–2011 ರಂದು ನಡೆದ ಒಂಬುಡ್ಸ್‌ಮನ್‌ರವರ ಸಭೆಯ ಸಭಾ ನಡವಳಿಗಳು.

**ಪ್ರಸ್ತಾವನೆ:**

ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ ಒಂಬುಡ್ಸ್‌ಮನ್‌ರವರಿಗೆ ಪರಿಹಾರವಾಗಿ ಪ್ರತಿ ಸಿಟ್ಟಿಂಗ್ ಗೆ ರೂ. 500–00 ಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: 1 ರ ಭಾರತ ಸರ್ಕಾರ ಆದೇಶದಂತೆ ಪಾವತಿಸಲಾಗಿತ್ತಿದೆ. ದಿನಾಂಕ: 07–07–2011 ರಂದು ಮಾನ್ಯ ಸಚಿವರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಒಂಬುಡ್ಸ್‌ಮನ್‌ರವರ ಸಭೆಯಲ್ಲಿ ಜಿಲ್ಲಾ ಒಂಬುಡ್ಸ್‌ಮನ್‌ರವರು ಪರಿಹಾರ ಧನವನ್ನು ಪರಷ್ಕರಿಸುವಂತೆ ಬೇಡಿಕೆಯನ್ನು ಸಲ್ಲಿಸಿರುತ್ತಾರೆ.

ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಅಧಿನಿಯಮ 2005 ರ ಪ್ರಕರಣ 27 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಭಾರತ ಸರ್ಕಾರವು ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಸ್ವೀಕರಿಸಲಾಗುವ ದೂರಗಳನ್ನು ವಿಲೇ ಮಾಡಿ ಪರಿಹರಿಸಲು ಒಂಬುಡ್ಸ್‌ಮನ್‌ಗಳನ್ನು ನೇಮಿಸುವ ಕುರಿತು ಮೇಲೆ ಓದಲಾದ ಕ್ರಮ ಸಂ. 1 ರಂತೆ ಆದೇಶವನ್ನು ಹೊರಡಿಸಿದೆ. ಸದರಿ ಆದೇಶದ ಕಂಡಿಕೆ 3 ರಂತೆ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಒಂಬುಡ್ಸ್‌ಮನ್‌ರವರ ಸಂಭಾವನೆಯನ್ನು ನಿಗದಿಪಡಿಸುವ ಅಧಿಕಾರವನ್ನು ರಾಜ್ಯ ಸರ್ಕಾರವು ಹೊಂದಿರುತ್ತದೆ. ಒಂಬುಡ್ಸ್‌ಮನ್‌ಆಗಿ ಕಾರ್ಯನಿರ್ವಹಿಸುವವರು ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸುವುದರಿಂದ, ಹೆಚ್ಚಿನ ಅರ್ಹತೆಯುಳ್ಳ ವ್ಯಕ್ತಿಗಳನ್ನು ಕಾರ್ಯನಿರ್ವಹಿಸುವಂತೆ ಪ್ರೇರೇಪಿಸಲು ಮತ್ತು ಅವರುಗಳಿಂದ ಗುಣಮಟ್ಟದ ಕಾರ್ಯಕ್ಷಮತೆ ಪಡೆಯುವ ಹಿನ್ನೆಲೆಯಿಂದ ರಾಜ್ಯ ಸರ್ಕಾರವು ಒಂಬುಡ್ಸ್ ಮನ್‌ಗಳಿಗೆ ಸಂಭಾವನೆಯನ್ನು ನಿಗದಿಪಡಿಸಲು ತೀರ್ಮಾನಿಸಿರುತ್ತದೆ.

ಆದುದರಿಂದ ಕೆಳಕಂಡ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 213 ಮಗಾಂಊಖಾಯೊ 2009 ಬೆಂಗಳೂರು, ದಿನಾಂಕ: 29–09–2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಒಂಬುಡ್ಸ್‌ಮನ್‌ಗಳಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ನಿಗದಿಪಡಿಸಿ ಆದೇಶಿಸಿದೆ. ಇದಕ್ಕಾಗಿ ತಗಲುವ ವೆಚ್ಚವನ್ನು ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಶೇಕಡಾ 6 ರ ಆಡಳಿತಾತ್ಮಕ ವೆಚ್ಚದಲ್ಲಿ ಭರಿಸತಕ್ಕದ್ದು.

1) ಸಂಭಾವನೆಯನ್ನಾಗಿ ರೂ. 10000/– (ಹತ್ತು ಸಾವಿರ ಮಾತ್ರ) ವನ್ನು (ಇಡಿಗಂಟು) ಮಾಹೆಯಾನ ಪಾವತಿಸಲು ನಿಗದಿಪಡಿಸಿದೆ.
2) ಕುಂದುಕೊರತೆ/ದೂರುಗಳನ್ನು ಪರಿಹರಿಸಲು ಒಂಬುಡ್ಸ್‌ಮನ್‌ರವರು ಕರ್ತವ್ಯ ನಿರ್ವಹಿಸುವ ಪ್ರತಿ ದಿನಕ್ಕೆ ರೂ. 500/– ನ್ನು ಸಿಟ್ಟಿಂಗ್ ಫೀ ಆಗಿ ಮಾಹೆಯಾನ ಪಾವತಿಸಲು ನಿಗದಿಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಶಿವಶಂಕರ್**
ನಿರ್ದೇಶಕರು
ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ
ಖಾತರಿ ಯೋಜನೆ ಹಾಗೂ ಪದ ನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. ನಂ. 2484

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ವಿಶ್ವ ಬಂಡವಾಳ *ಹೂಡಿಕೆದಾರರ ಸಮಾವೇಶ 2012 ಕಾರ್ಯಕ್ರಮಕ್ಕೆ ಅನುದಾನ ಬಿಡುಗಡೆ ಮಾಡುವ ಕುರಿತು.*

**ಓದಲಾಗಿದೆ :** ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ *ಸಂಖ್ಯೆ: ಕೈವಾಇ/ಎಇಪಿ*/ಎ1/ವಿ.ಬಂ.ಸ/19/2011–12, ದಿನಾಂಕ: 05–09–2011.

**ಪ್ರಸ್ತಾವನೆ:**

ಕರ್ನಾಟಕ ಉದ್ಯೋಗ ಮಿತ್ರ, ವತಿಯಿಂದ 2012 ರಲ್ಲಿ ನಡೆಸಲು ಉದ್ದೇಶಿಸಲಾಗಿರುವ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶದ ಅಂಗವಾಗಿ 2011–12ನೇ ಸಾಲಿನಲ್ಲಿ ಹೊರದೇಶಗಳಲ್ಲಿ ಹೂಡಿಕೆದಾರರ ಸಮಾವೇಶವನ್ನು ಹಾಗೂ ರೋಡ್ ಶೋಗಳನ್ನು ನಡೆಸಲು ಉದ್ದೇಶಿಸಲಾಗಿದ್ದು. ರೂ. 225.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ವ್ಯವಸ್ಥಾಪಕ ನಿರ್ದೇಶಕರು ಕೋರಿರುತ್ತಾರೆ. 2012 ರಲ್ಲಿ ನಡೆಸಲು ಉದ್ದೇಶಿಸಿರುವ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶಕ್ಕೆ ಪೂರ್ವಭಾವಿಯಾಗಿ ಹೊರದೇಶಗಳಲ್ಲಿ ರೋಡ್ ಶೋಗಳನ್ನು ನಡೆಸಲು ಪೂರ್ವಭಾವಿ ಸಿದ್ಧತೆಗಳನ್ನು ಮಾಡಬೇಕಾಗಿದ್ದು, ಇದಕ್ಕಾಗಿ ರೂ. 225.00 ಲಕ್ಷಗಳ ಅನುದಾನವನ್ನು ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ ಯೋಜನೆಯ ಲೆಕ್ಕ ಶೀರ್ಷಿಕೆ "2852–80–800–0–46–125" ರಡಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರಿಗೆ ಮಂಜೂರು ಮಾಡಿ ಬಿಡುಗಡೆ ಮಾಡಲು, ಆಯುಕ್ತರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 22 ಎಸ್‌ಪಿಐ 2011 (ಭಾ), ಬೆಂಗಳೂರು, ದಿನಾಂಕ: 29–09–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2012 ರಲ್ಲಿ ನಡೆಸಲು ಉದ್ದೇಶಿಸಿರುವ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ 2012 ರ ಅಂಗವಾಗಿ ಹೊರದೇಶಗಳಲ್ಲಿ ಹೂಡಿಕೆದಾರರ ಸಮಾವೇಶ, ರೋಡ್ ಶೋ ಅಂಗವಾಗಿ ಪೂರ್ವಭಾವಿ ಸಿದ್ಧತೆ ಬಾಬ್ತು ರೂ. 225.00 ಲಕ್ಷ (ರೂ. ಎರಡು ನೂರಾ ಇಪ್ಪತ್ತೈದು ಲಕ್ಷ ಮಾತ್ರ) ಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2852–80–800–0–46–125 (ಯೋಜನೆ) ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ" 2011–12 ರಲ್ಲಿ ಭರಿಸತಕ್ಕದ್ದು.

ಮೇಲ್ಕಂಡ ಮೊತ್ತವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರುರವರು ಸಲ್ಲಿಸುವ ಸ್ವೀಕೃತ ರಸೀದಿಯ ಮೇಲೆ, ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ನಗದೀಕರಿಸಿಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ವಿ. ಶ್ರೀನಿವಾಸ ದೀಕ್ಷಿತ್**

ಪಿ.ಆರ್. ನಂ. 2485

ಪೀಠಾಧಿಕಾರಿ (ತಾಂತ್ರಿಕ ಕೋಶ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** 2011–12ನೇ ಸಾಲಿಗೆ ಕರ್ನಾಟಕ ಸುಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣೆ ಯೋಜನೆಯಡಿ – 2ನೇ ಕಂತು ಅನುದಾನದ ವೆಚ್ಚಕ್ಕೆ ಅನುಮತಿ ನೀಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಅಪಜೀ 181 ಎಫ್‌ಎಪಿ 2011, ದಿನಾಂಕ 30–06–2011.
2. ಸರ್ಕಾರದ ಆದೇಶ ಸಂಖ್ಯೆ : ಅಪಜೀ 181 ಎಫ್‌ಎಪಿ 2011, ದಿನಾಂಕ 15–07–2011.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರ ಪತ್ರ ಸಂಖ್ಯೆ : ಡಿ–1/ಬಿಯುಡಿ/ಸಿಆರ್–50/ 2011–12, ದಿನಾಂಕ 05–08–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 30–06–2011ರ ಆದೇಶದಲ್ಲಿ 2011–12ನೇ ಸಾಲಿಗೆ ರೂ.5260.00 ಲಕ್ಷಗಳ ವೆಚ್ಚದಲ್ಲಿ ಕರ್ನಾಟಕ ಸುಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿವೈವಿಧ್ಯ ಸಂರಕ್ಷಣೆ ಯೋಜನೆಯ ವಾರ್ಷಿಕ ಕ್ರಿಯಾಯೋಜನೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 15–07–2011ರ ಆದೇಶದಲ್ಲಿ ರೂ. 946.73 ಲಕ್ಷಗಳನ್ನು ಮೊದಲನೆ ಕಂತಾಗಿ ಬಿಡುಗಡೆ ಮಾಡಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 05–08–2011ರ ಪತ್ರದಲ್ಲಿ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಕೆ.ಎಸ್.ಎಫ್.ಎಂ.ಬಿ.ಸಿ. ಯೋಜನೆಯಡಿ ಕಾಮಗಾರಿಗಳು ಪ್ರಗತಿಯಲ್ಲಿವೆಯೆಂದು ತಿಳಿಸುತ್ತಾ ಪ್ರಸಕ್ತ ಸಾಲಿನ ಎಂಪಿಕ್ ಕಾರ್ಯಕ್ರಮದನುಸಾರ 2011ರ ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್ ಅಂತ್ಯದವರೆಗೆ ಅನುಷ್ಠಾನಗೊಳಿಸುವ ಕಾಮಗಾರಿ ಬಿಲ್ಲುಗಳ ಪಾವತಿಗಾಗಿ ಒಟ್ಟು ರೂ.1943.63 ಲಕ್ಷಗಳನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಗಳಡಿ ಬಿಡುಗಡೆ ಮಾಡಲು ಕೋರಿರುತ್ತಾರೆ.

(ರೂ. ಲಕ್ಷಗಳಲ್ಲಿ)

| | |
|---|---|
| 24-06-01-102-2-81 – Karnataka Sustainable Forest Management and Bio-Diversity Conservation Scheme – 139 – Major Works | 1,844.81 |
| 24-06-01-102-2-81 – Karnataka Sustainable Forest Management and Bio-Diversity Conservation Scheme – 422 – Special Components Plan | 65.65 |

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

## ಸುತ್ತೋಲೆ

ಸಂಖ್ಯೆ: ವಿಯಇ 167 ವಿತ್ರಮ 2011, ಬೆಂಗಳೂರು, ದಿನಾಂಕ: 26/09/2011

**ವಿಷಯ :** ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ವ್ಯಾಪ್ತಿಯ ಅಂಗಸಂಸ್ಥೆಗಳಲ್ಲಿ ಪ್ಲಾಸ್ಟಿಕ್ ಬಳಕೆ ನಿಷೇಧ ಕುರಿತು.

ಪ್ಲಾಸ್ಟಿಕ್ ವಸ್ತುಗಳಾದ ಪ್ಲಾಸ್ಟಿಕ್ ಕೈಚೀಲ, ತಟ್ಟೆ, ಲೋಟ, ಚಮಚ, ಇತ್ಯಾದಿಗಳ ಬಳಕೆಯು ಹೆಚ್ಚಾಗುತ್ತಿದ್ದು, ಈ ಪ್ಲಾಸ್ಟಿಕ್ ವಸ್ತುಗಳು ಜೈವಿಕ ನಾಶ ಹೊಂದುವುದಿಲ್ಲ. ಸಂಗ್ರಹವಾದ ಪ್ಲಾಸ್ಟಿಕ್‌ಗಳ ನಿರ್ವಹಣೆ ಗಂಭೀರ ಸಮಸ್ಯೆಯನ್ನುಂಟು ಮಾಡುತ್ತಿದೆ. ಅಜಾಗರೂಕತೆಯಿಂದ ಎಸೆದ ಪ್ಲಾಸ್ಟಿಕ್ ವಸ್ತುಗಳು ಚರಂಡಿಯಲ್ಲಿ ಸೇರಿ ನೀರಿನ ಸರಾಗಚಲನೆಗೆ ತಡೆಯುಂಟಾಗುತ್ತಿದೆ. ಪ್ಲಾಸ್ಟಿಕ್ ಬಳಕೆ ಮತ್ತು ವಿಲೇವಾರಿ ನಿಷೇಧಿಸುವ ಬಗ್ಗೆ ಅರಣ್ಯ ಪರಿಸರ, ಜೀವಿಶಾಸ್ತ್ರ, ಇಲಾಖೆಯಿಂದ ಅನೇಕ ಸರ್ಕಾರಿ ಆದೇಶಗಳನ್ನು ಹೊರಡಿಸಲಾಗಿದೆ. ಅದರಂತೆ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಅಂಗ ಸಂಸ್ಥೆಗಳು ಸಭೆ ಸಮಾರಂಭ ಹಾಗೂ ಕಚೇರಿಗಳ ಆವರಣದಲ್ಲಿ ಪ್ಲಾಸ್ಟಿಕ್ ಉತ್ಪಾದನೆಗಳ ಬಳಕೆ, ಮಾರಾಟ ಮತ್ತು ವಿಲೇವಾರಿಯನ್ನು ನಿಷೇಧಿಸಲು ಕ್ರಮಕೈಗೊಳ್ಳಬೇಕೆಂದು ತಿಳಿಸಲಾಗಿದೆ. ಹಾಗೂ ಪರಿಸರ ಸಂರಕ್ಷಣೆಯ ದೃಷ್ಟಿಯಿಂದ ಪ್ಲಾಸ್ಟಿಕ್‌ನಿಂದ ಪರಿಸರದ ಮೇಲೆ ಉಂಟಾಗುವ ದುಷ್ಪರಿಣಾಮಗಳನ್ನು ತಡೆಗಟ್ಟಲು ಜೈವಿಕವಾಗಿ ಅಳಿಯುವ ಸಾಂಪ್ರದಾಯಿಕ ಸಾಮಗ್ರಿಗಳನ್ನು ಮಾತ್ರ ಕಡ್ಡಾಯವಾಗಿ ಬಳಸುವುದನ್ನು ಖಾತ್ರಿಪಡಿಸಿಕೊಳ್ಳಬೇಕೆಂದು ಹಾಗೂ ಯಾವುದೇ ಕಾರಣಕ್ಕೂ ಪ್ಲಾಸ್ಟಿಕ್ ಬಳಸಬಾರದೆಂದು ಸೂಚಿಸಲಾಗಿದೆ.

**ಪ್ರಕಾಶ್‌ರಾವ್ ಕೇಸರಕರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ. ಆರ್. 2501

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಗೃಹ ಮಂಡಳಿಯು ಮೆ: ಬೆಂಗಳೂರು ಮೆಟ್ರೋ ಸಿಟಿ-ಡೆವಲಪರ್ಸ್ ಪ್ರೈ. ಲಿಮಿಟೆಡ್, ಬೆಂಗಳೂರು ಇವರೊಡನೆ ಜಂಟಿ ಸಹಭಾಗಿತ್ವದಲ್ಲಿ ವಸತಿ ಯೋಜನೆ ಹಮ್ಮಿಕೊಳ್ಳಲು ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ವಇ 124 ಕಗೃಮಂ 2001, ದಿನಾಂಕ: 03-09-2002 ಮತ್ತು ಸೇರ್ಪಡೆ ಆದೇಶ ಸಂಖ್ಯೆ ವಇ 246 ಕಗೃಮಂ 2002, ದಿನಾಂಕ: 10-06-2003.
2. ಸರ್ಕಾರದ ಆದೇಶ ಸಂಖ್ಯೆ: ವಇ 233 ಕಗೃಮಂ 2008, ದಿನಾಂಕ: 20-05-2011.
3. ಕರ್ನಾಟಕ ಗೃಹ ಮಂಡಳಿ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ: ಕೆಹೆಚ್‌ಬಿ/ಜೆಡಿಟಿಪಿ/ಜೆವಿ/ಬಿಎಂಸಿಡಿಪಿಎಲ್-ಕೊಳತ್ತೂರು/130 2007-08, ದಿನಾಂಕ: 11-12-2008 ಮ್ತು 05/11-07-2011.
4. ಸರ್ಕಾರದ ಆದೇಶ ಸಂಖ್ಯೆ: ವಇ 233 ಕಗೃಮಂ 2008, ದಿನಾಂಕ: 25-07-2011.
5. ಕರ್ನಾಟಕ ಗೃಹ ಮಂಡಳಿ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ: ಕೆಹೆಚ್‌ಬಿ/ಜೆಡಿಟಿಪಿ/ಕೊಳತ್ತೂರು/130/189-2007-08, ದಿನಾಂಕ: 06/07-09-2011.

**ಪ್ರಸ್ತಾವನೆ :**

ಕನಾಟಕ ಗೃಹ ಮಂಡಳಿಯು ಖಾಸಗಿಯವರ ಜಮೀನಿನಲ್ಲಿ ವಸತಿ ಯೋಜನೆಗಳನ್ನು ಕೈಗೊಳ್ಳಲು ಮೇಲೆ ಓದಲಾದ ಕ್ರಮಾಂಕ (1)ರ ಆದೇಶ ಮತ್ತು ಸೇರ್ಪಡೆ ಆದೇಶಗಳಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ. ಅದರಂತೆ, ಖಾಸಗಿಯವರೊಂದಿಗೆ ಜಂಟಿಯಾಗಿ ಕೈಗೊಳ್ಳುವ ವಸತಿ ಯೋಜನೆಗಳನ್ನು ಪ್ರಾರಂಭಿಸಲು ಅವರೊಂದಿಗೆ ಒಡಂಬಡಿಕೆ ಮಾಡಿಕೊಳ್ಳಲು ನಿಗದಿತ ನಮೂನೆಯಲ್ಲಿ ಒಡಂಬಡಿಕೆ ಪತ್ರದ ಮಾದರಿಗೆ, ಓದಲಾದ ಕ್ರಮಾಂಕ (2)ರ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.

ಕರ್ನಾಟಕ ಗೃಹ ಮಂಡಳಿಯು ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕು, ಕೊಳತ್ತೂರು ಗ್ರಾಮದಲ್ಲಿ 77.16 ಎಕರೆ ಪ್ರದೇಶದಲ್ಲಿ, ಮೆ: ಬೆಂಗಳೂರು ಮೆಟ್ರೋ ಸಿಟಿ ಡೆವಲಪರ್ಸ್ ಪ್ರೈ. ಲಿಮಿಟೆಡ್ ಬೆಂಗಳೂರು ಇವರೊಂದಿಗೆ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳಲು ಹಾಗೂ ಅವರೊಂದಿಗೆ ಯೋಜನೆಯ ಕುರಿತು ಒಡಂಬಡಿಕೆ ಮಾಡಿಕೊಳ್ಳಲು ಅನುಮೋದನೆ ಕೋರಿದ್ದರ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಪರಿಶೀಲಿಸಿ ನಂತರ, ಮೇಲೆ ಓದಲಾದ ಕ್ರಮಾಂಕ (4)ರ ದಿನಾಂಕ: 25-07-2011ರ ಪತ್ರದಲ್ಲಿ ಸದರಿ ವಸತಿ ಯೋಜನೆಯನ್ನು ಕೈಗೊಳ್ಳುವ ಬಗ್ಗೆ ಒಪ್ಪಂದ ಮಾಡಿಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (5)ರ ಪತ್ರದಲ್ಲಿ ಕರ್ನಾಟಕ ಗೃಹ ಮಂಡಳಿಯ ಆಯುಕ್ತರು ಪ್ರಸ್ತಾಪಿಸುತ್ತಾ, ಮೇಲೆ ತಿಳಿಸಿರುವ ಸರ್ಕಾರದ ಅನುಮೋದನೆಯನ್ನು ಸರ್ಕಾರಿ ಆದೇಶದ ರೂಪದಲ್ಲಿ ನೀಡುವಂತೆ ಮತ್ತು ಆ ಬಗ್ಗೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸುವಂತೆ ಕೋರಿರುತ್ತಾರೆ.

ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ನಂತರ ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 233 ಕಗೃಮಂ 2008 ಬೆಂಗಳೂರು, ದಿನಾಂಕ : 22-09-2011.**

ಮೇಲಿನ ಪ್ರಸ್ತಾವನೆಗಳ ಹಿನ್ನೆಲೆಯಲ್ಲಿ, ಕರ್ನಾಟಕ ಗೃಹ ಮಂಡಳಿಯು ಮೆ: ಬೆಂಗಳೂರು ಮೆಟ್ರೋ ಸಿಟಿ ಡೆವಲಪರ್ಸ್, ಬೆಂಗಳೂರು ಇವರ ಸಹಭಾಗಿತ್ವದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕು, ಕೊಳತ್ತೂರು ಗ್ರಾಮದಲ್ಲಿ ಸರ್ವೆ ನಂ. 121, 122, 124, 126, 226, 225, 224, 123, 199, 117, 121/2, 205, 231, 248, 249, 250 ಮತ್ತು 251 ರಲ್ಲಿ ಒಟ್ಟು 77.16 ಎಕರೆ ಪ್ರದೇಶದಲ್ಲಿ ಸಹಭಾಗಿತ್ವ ವಸತಿ ಯೋಜನೆಯನ್ನು ಕೈಗೊಳ್ಳುವ ಬಗ್ಗೆ ಒಪ್ಪಂದ ಮಾಡಿಕೊಳ್ಳಲು ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಪಾರ್ವತಿ**
ಪೀಠಾಧಿಕಾರಿ-3, ವಸತಿ ಇಲಾಖೆ

ಪಿ.ಆರ್. 2502

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಗೃಹ ಮಂಡಳಿಯು ಮೆ: ಗೋಲ್ಡನ್ ಗೇಟ್ ಪ್ರಾಪರ್ಟೀಸ್ ಲಿಮಿಟೆಡ್, ಬೆಂಗಳೂರು ಇವರೊಡನೆ ಜಂಟಿ ಸಹಭಾಗಿತ್ವದಲ್ಲಿ ವಸತಿ ಯೋಜನೆ ಹಮ್ಮಿಕೊಳ್ಳಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ವಇ 124 ಕಗೃಮಂ 2001, ದಿನಾಂಕ 03–09–2002 ಮತ್ತು ಸೇರ್ಪಡೆ ಆದೇಶ ಸಂಖ್ಯೆ: ವಇ 246 ಕಗೃಮಂ 2002, ದಿನಾಂಕ: 10–06–2003.
2. ಸರ್ಕಾರಿ ಆದೇಶ ಸಂಖ್ಯೆ: ವಇ 233 ಕಗೃಮಂ 2008, ದಿನಾಂಕ: 20–05–2011.
3. ಕರ್ನಾಟಕ ಗೃಹ ಮಂಡಳಿ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ: ಕೆಹೆಚ್‌ಬಿ/ಜೆಡಿಟಿಪಿ/ಜೆವಿ/109/2006–07, ದಿನಾಂಕ: 27–09–2007 ಮತ್ತು 31–07–2009.
4. ಸರ್ಕಾರಿ ಪತ್ರ ಸಂಖ್ಯೆ: ವಇ 329 ಕಗೃಮಂ 2007, ದಿನಾಂಕ: 25–07–2011.
5. ಕರ್ನಾಟಕ ಗೃಹ ಮಂಡಳಿ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ: ಕೆಹೆಚ್‌ಬಿ/ ಜೆಡಿಟಿಪಿ/ ಕೊಳತ್ತೂರು/ 130/189/2007–08, ದಿನಾಂಕ: 06/07–09–2011.

**ಪ್ರಸ್ತಾವನೆ :**

ಕರ್ನಾಟಕ ಗೃಹ ಮಂಡಳಿಯು ಖಾಸಗಿಯವರ ಜಮೀನಿನಲ್ಲಿ ವಸತಿ ಯೋಜನೆಗಳನ್ನು ಕೈಗೊಳ್ಳಲು ಮೇಲೆ ಓದಲಾದ ಕ್ರಮಾಂಕ (1)ರ ಆದೇಶ ಮತ್ತು ಸೇರ್ಪಡೆ ಆದೇಶಗಳಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ. ಅದರಂತೆ, ಖಾಸಗಿಯವರೊಂದಿಗೆ ಜಂಟಿಯಾಗಿ ಕೈಗೊಳ್ಳುವ ವಸತಿ ಯೋಜನೆಗಳನ್ನು ಪ್ರಾರಂಭಿಸಲು ಅವರೊಂದಿಗೆ ಒಡಂಬಡಿಕೆ ಮಾಡಿಕೊಳ್ಳಲು ನಿಗದಿತ ನಮೂನೆ ಯಲ್ಲಿ ಒಡಂಬಡಿಕೆ ಪತ್ರದ ಮಾದರಿಗೆ, ಓದಲಾದ ಕ್ರಮಾಂಕ (2)ರ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.

ಕರ್ನಾಟಕ ಗೃಹ ಮಂಡಳಿಯು ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ, ಮೆ: ಗೋಲ್ಡನ್ ಗೇಟ್ ಪ್ರಾಪರ್ಟೀಸ್ ಲಿಮಿಟೆಡ್, ಬೆಂಗಳೂರು ಇವರೊಡನೆ ಜಂಟಿ ಸಹಭಾಗಿತ್ವದಲ್ಲಿ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಸೋಮಪುರ ಮತ್ತು ಇತರೆ ಗ್ರಾಮಗಳಲ್ಲಿ ಒಟ್ಟು 100 ಎಕರೆ ಜಮೀನಿನಲ್ಲಿ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳಲು ಹಾಗೂ ಅವರೊಂದಿಗೆ ಯೋಜನೆಯ ಕುರಿತು ಒಡಂಬಡಿಕೆ ಮಾಡಿಕೊಳ್ಳಲು, ಅನುಮೋದನೆ ಕೋರಿದ್ದರ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಪರಿಶೀಲಿಸಿ ನಂತರ, ಮೇಲೆ ಓದಲಾದ ಕ್ರಮಾಂಕ (4)ರ ದಿನಾಂಕ: 25–07–2011ರ ಪತ್ರದಲ್ಲಿ ಸದರಿ ವಸತಿ ಯೋಜನೆಯನ್ನು ಕೈಗೊಳ್ಳುವ ಬಗ್ಗೆ ಒಪ್ಪಂದ ಮಾಡಿಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (5)ರ ಪತ್ರದಲ್ಲಿ ಕರ್ನಾಟಕ ಗೃಹ ಮಂಡಳಿಯ ಆಯುಕ್ತರು ಪ್ರಸ್ತಾಪಿಸುತ್ತಾ, ಮೇಲೆ ತಿಳಿಸಿರುವ ಸರ್ಕಾರದ ಅನುಮೋದನೆಯನ್ನು ಸರ್ಕಾರಿ ಆದೇಶದ ರೂಪದಲ್ಲಿ ನೀಡುವಂತೆ ಮತ್ತು ಆ ಬಗ್ಗೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸುವಂತೆ ಕೋರಿರುತ್ತಾರೆ.

ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ನಂತರ ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 329 ಕಗೃಮಂ 2007, ಬೆಂಗಳೂರು, ದಿನಾಂಕ : 22–09–2011.**

ಮೇಲಿನ ಪ್ರಸ್ತಾವನೆಗಳ ಹಿನ್ನೆಲೆಯಲ್ಲಿ, ಕರ್ನಾಟಕ ಗೃಹ ಮಂಡಳಿಯು ಮೆ: ಗೋಲ್ಡನ್ ಗೇಟ್ ಪ್ರಾಪರ್ಟೀಸ್ ಲಿಮಿಟೆಡ್, ಬೆಂಗಳೂರು ಇವರೊಡನೆ ಜಂಟಿ ಸಹಭಾಗಿತ್ವದಲ್ಲಿ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಸೋಮಪುರ ಮತ್ತು ಇತರೆ ಗ್ರಾಮಗಳಲ್ಲಿ ಒಟ್ಟು 100 ಎಕರೆ ಜಮೀನಿನಲ್ಲಿ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳುವ ಬಗ್ಗೆ ಒಪ್ಪಂದ ಮಾಡಿಕೊಳ್ಳಲು ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಪಾರ್ವತಿ**

ಪಿ.ಆರ್. 2503 ಪೀಠಾಧಿಕಾರಿ–3, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಗೃಹ ಮಂಡಳಿಯು ಮೆ: ನಂಜನಗೂಡು ಪ್ರಾಜೆಕ್ಟ್ಸ್ ಪ್ರೈ. ಲಿಮಿಟೆಡ್ ಬೆಂಗಳೂರು ಇವರೊಡನೆ ಜಂಟಿ ಸಹಭಾಗಿತ್ವದಲ್ಲಿ ವಸತಿ ಯೋಜನೆ ಹಮ್ಮಿಕೊಳ್ಳಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ವಇ 124 ಕಗೃಮಂ 2001, ದಿನಾಂಕ 03–09–2002 ಮತ್ತು ಸೇರ್ಪಡೆ ಆದೇಶ ಸಂಖ್ಯೆ: ವಇ 246 ಕಗೃಮಂ 2002, ದಿನಾಂಕ: 10–06–2003.
2. ಸರ್ಕಾರಿ ಆದೇಶ ಸಂಖ್ಯೆ: ವಇ 233 ಕಗೃಮಂ 2008, ದಿನಾಂಕ: 20–05–2011.
3. ಕರ್ನಾಟಕ ಗೃಹ ಮಂಡಳಿ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ: ಕೆಹೆಚ್‌ಬಿ/ಜೆಡಿಟಿಪಿ/ನಂಜನಗೂಡು/102/2006–07, ದಿನಾಂಕ: 20–6–2007 ಮತ್ತು 28–09–2007.
4. ಸರ್ಕಾರಿ ಪತ್ರ ಸಂಖ್ಯೆ: ವಇ 233 ಕಗೃಮಂ 2007, ದಿನಾಂಕ: 11–08–2011.
5. ಕರ್ನಾಟಕ ಗೃಹ ಮಂಡಳಿ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ: ಕೆಹೆಚ್‌ಬಿ/ ಜೆಡಿಟಿಪಿ/ ಕೊಳತ್ತೂರು/ 130/189/2007–08, ದಿನಾಂಕ: 06/07–09–2011.

**ಪ್ರಸ್ತಾವನೆ :**

ಕರ್ನಾಟಕ ಗೃಹ ಮಂಡಳಿಯು ಖಾಸಗಿಯವರ ಜಮೀನಿನಲ್ಲಿ ವಸತಿ ಯೋಜನೆಗಳನ್ನು ಕೈಗೊಳ್ಳಲು ಮೇಲೆ ಓದಲಾದ ಕ್ರಮಾಂಕ (1)ರ ಆದೇಶ ಮತ್ತು ಸೇರ್ಪಡೆ ಆದೇಶಗಳಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ. ಅದರಂತೆ, ಖಾಸಗಿಯವರೊಂದಿಗೆ ಜಂಟಿಯಾಗ ಕೈಗೊಳ್ಳುವ ವಸತಿ ಯೋಜನೆಗಳನ್ನು ಪ್ರಾರಂಭಿಸಲು ಅವರೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ನಿಗದಿತ ನಮೂನೆ ಯಲ್ಲಿ ಒಡಂಬಡಿಕೆ ಪತ್ರದ ಮಾದರಿಗೆ, ಓದಲಾದ ಕ್ರಮಾಂಕ (2)ರ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.

ಕರ್ನಾಟಕ ಗೃಹ ಮಂಡಳಿಯ ಆಯುಕ್ತರು, ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ, ಮೆ: ನಂಜನಗೂಡು ಪ್ರಾಜೆಕ್ಟ್ಸ್ ಪ್ರೈ. ಲಿಮಿಟೆಡ್ ಬೆಂಗಳೂರು ಇವರೊಂದಿಗೆ ಮೈಸೂರು ತಾಲ್ಲೂಕು, ಕೋಚನಹಳ್ಳಿ ಮತ್ತು ನಂಜನಗೂಡು ತಾಲ್ಲೂಕು ಅಡಕನಹಳ್ಳಿ ಗ್ರಾಮಗಳ

ಒಟ್ಟು 390 ಎಕರೆ ಜಮೀನಿನಲ್ಲಿ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳಲು ಹಾಗೂ ಅವರೊಂದಿಗೆ ಯೋಜನೆಯ ಕುರಿತು ಒಡಂಬಡಿಕೆ ಮಾಡಿಕೊಳ್ಳಲು ಅನುಮೋದನೆ ಕೋರಿದ್ದರ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ, ಮೇಲೆ ಓದಲಾದ ಕ್ರಮಾಂಕ (4)ರ ದಿನಾಂಕ: 11–08–2011ರ ಪತ್ರದಲ್ಲಿ ಸದರಿ ವಸತಿ ಯೋಜನೆಯನ್ನು ಕೈಗೊಳ್ಳುವ ಬಗ್ಗೆ ಒಪ್ಪಂದ ಮಾಡಿಕೊಳ್ಳಲು ಸಕಾರದ ಅನುಮೋದನೆ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (5)ರ ಪತ್ರದಲ್ಲಿ ಕರ್ನಾಟಕ ಗೃಹ ಮಂಡಳಿಯ ಆಯುಕ್ತರು ಪ್ರಸ್ತಾಪಿಸುತ್ತಾ, ಮೇಲೆ ಕ್ರಮಾಂಕ (4)ರಲ್ಲಿ ನೀಡಿರುವ ಸರ್ಕಾರದ ಅನುಮೋದನೆಯನ್ನು ಸರ್ಕಾರಿ ಆದೇಶದ ರೂಪದಲ್ಲಿ ನೀಡುವಂತೆ ಮತ್ತು ಆ ಬಗ್ಗೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸುವಂತೆ ಕೋರಿರುತ್ತಾರೆ.

ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ನಂತರ ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 233 ಕಗೃಮಂ 2007, ಬೆಂಗಳೂರು, ದಿನಾಂಕ : 22–09–2011.**

ಮೇಲಿನ ಪ್ರಸ್ತಾವನೆಗಳ ಹಿನ್ನೆಲೆಯಲ್ಲಿ, ಕರ್ನಾಟಕ ಗೃಹ ಮಂಡಳಿಯು ಮೆ: ನಂಜನಗೂಡು ಪ್ರಾಜೆಕ್ಟ್ಸ್, ಬೆಂಗಳೂರು ಇವರೊಂದಿಗೆ ಮೈಸೂರು ತಾಲ್ಲೂಕು, ಕೋಚನಹಳ್ಳಿ ಮತ್ತು ನಂಜನಗೂಡು ತಾಲ್ಲೂಕು ಅಡಕನಹಳ್ಳಿ ಗ್ರಾಮಗಳ ಒಟ್ಟು 390 ಎಕರೆ ಜಮೀನಿನಲ್ಲಿ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳಲವ ಬಗ್ಗೆ ಒಪ್ಪಂದ ಮಾಡಿಕೋಳ್ಳಲು ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಪಾರ್ವತಿ**

ಪಿ.ಆರ್. 2504 ಪೀಠಾಧಿಕಾರಿ–3, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ವಡೆಯರಮಂಚನಹಳ್ಳಿ, ಕೋನಸಂದ್ರ ಮತ್ತು ಬೊಮ್ಮಾಂಡಳ್ಳಿ ಗ್ರಾಮಗಳಲ್ಲಿ ಕರ್ನಾಟಕ ಗೃಹ ಮಂಡಳಿಯುಉ ಮೆ: ವೈಷ್ಣವಿ ಡೆವಲಪರ್ಸ್, ಬೆಂಗಳೂರು ಇವರೊಂದಿಗೆ ಸಹಭಾಗಿತ್ವ ವಸತಿ ಯೋಜನೆ ಕೈಗೊಳ್ಳಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರ ಕಚೇರಿಯ ಪತ್ರ ಸಂಖ್ಯೆ: ಕಗೃಮಂ/ಜಂಏ/ಸಯೋ/ಜೆವಿ/ವೈಷವಿ/72/136/2010–11, ದಿನಾಂಕ: 22–07–2011/01–08–2011.

**ಪ್ರಸ್ತಾವನೆ :**

ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ, ಮೆ: ವೈಷ್ಣವಿ ಡೆವಲಪರ್ಸ್, ಬೆಂಗಳೂರು. ಇವರು ದಿನಾಂಕ: 15–07–2010 ರ ಪತ್ರದಲ್ಲಿ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ವಡೆಯರಮಂಚನಹಳ್ಳಿ, ಕೋನಸಂದ್ರ ಮತ್ತು ಬೊಮ್ಮಂಡಳ್ಳಿ ಗ್ರಾಮಗಳಲ್ಲಿ ಸುಮಾರು 200 ಎಕರೆ ಜಮೀನಿನಲ್ಲಿ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಹಮ್ಮಿಕೊಳ್ಳುವ ಬಗ್ಗೆ ಆಸಕ್ತಿ ವ್ಯಕ್ತಪಡಿಸಿದ್ದು, ಸದರಿ ಪ್ರಸ್ತಾವನೆಯನ್ನು ದಿನಾಂಕ: 19–07–2010ರ ಸಹಭಾಗಿತ್ವದ ಯೋಜನೆಗಳನ್ನು ಪರಿಶೀಲಿಸುವ ಉಪ–ಸಮಿತಿ ಸಭೆಯಲ್ಲಿ ಹಾಗೂ ದಿನಾಂಕ : 21–07–2010ರ ಮಂಡಳಿ ಸಭೆಯ ಮುಂದೆ ಮಂಡಿಸಲಾಗಿತ್ತು ಎಂದು ಉಪ–ಸಮಿತಿಯು ನಡವಳಿಯಂತೆ, ಪ್ರಸ್ತಾಪಿತ ಜಮೀನುಗಳ ಭೂ–ಉಪಯೋಗದ ಬಗ್ಗೆ ಪರಿಶಿಲಿಸಿ ಕೈಗಾರಿಕಾ ವಲಯದಿಂದ ವಸತಿ ವಲಯಕ್ಕೆ ಭೂ–ಉಪಯೋಗ ಬದಲಾವಣೆ ಸಾಧ್ಯತೆಯಿರುವ ಕಾರಣ, ಮಂಡಳಿಗೆ ಯವುದೇ ಆರ್ಥಿಕ ಭಾರವಿಲ್ಲದೆ ಮೆ: ವೈಷ್ಣವಿ ಡೆವಲಪರ್ಸ್, ಬೆಂಗಳೂರು. ಇವರೊಂದಿಗೆ ಮಾರ್ಕೆಟಿಂಗ್ ಸಹಭಾಗಿತ್ವದ ವಸತಿ ಯೋಜನೆಮತ್ತು ನಿಯಮಗಳಡಿಯಲ್ಲಿ ಪರಿಗಣಿಸಲು ತೀರ್ಮಾನಿಸಿರುವುದಾಗಿ ತಿಳಿಸಿದ್ದಾರೆ. ಆದುದರಿಂದ, ಕರ್ನಾಟಕ ಗೃಹ ಮಂಡಳಿಯು ದಿನಾಂಕ: 21–07–2010ರ ಮಂಡಳಿ ಸಭೆಯಲ್ಲಿ ಕೈಗೊಂಡಿರುವ ನಿರ್ಣಯದಂತೆ ಮೆ: ವೈಷ್ಣವಿ ಡೆವಲಪರ್ಸ್, ಬೆಂಗಳೂರು. ಇವರ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳವ ಬಗ್ಗೆ ಸದರಿಯವರೊಂದಿಗೆ ಒಪ್ಪಂದ ಮಾಡಿಕೊಳ್ಳಲು ಮತ್ತು ಜಮೀನುಗಳನ್ನು ಮಂಡಳಿಗೆ ಹಸ್ತಾಂತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಮಂಡಳಿಯು ಆಯುಕ್ತರು ಕೋರಿದ್ದಾರೆ.

ಕರ್ನಾಟಕ ಗೃಹ ಮಂಡಳಿಯ ಆಯುಕ್ತರು, ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ, ಮೆ: ನಂಜನಗೂಡು ಪ್ರಾಜೆಕ್ಟ್ಸ್, ಬೆಂಗಳೂರು ಇವರೊಂದಿಗೆ ಮೈಸೂರು ತಾಲ್ಲೂಕು, ಕೋಚನಹಳ್ಳಿ ಮತ್ತು ನಂಜನಗೂಡು ತಾಲ್ಲೂಕು ಅಡಕನಹಳ್ಳಿ ಗ್ರಾಮಗಳ ಒಟ್ಟು 390 ಎಕರೆ ಜಮೀನಿನಲ್ಲಿ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳಲು ಹಾಗೂ ಅವರೊಂದಿಗೆ ಯೋಜನೆಯ ಕುರಿತು ಒಡಂಬಡಕೆ ಮಾಡಿಕೊಳ್ಳಲು ಅನುಮೋದನೆ ಕೋರಿದ್ದರ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ, ಮೇಲೆ ಓದಲಾದ ಕ್ರಮಾಂಕ (4)ರ ದಿನಾಂಕ: 11–08–2011ರ ಪತ್ರದಲಲಿ ಸದರಿ ವಸತಿ ಯೋಜನೆಯನ್ನು ಕೈಗೊಳ್ಳವ ಬಗ್ಗೆ ಒಪ್ಪಂದ ಮಾಡಿಕೊಳ್ಳಲು ಸಕಾರದ ಅನುಮೋದನೆ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (5)ರ ಪತ್ರದಲ್ಲಿ ಕರ್ನಾಟಕ ಗೃಹ ಮಂಡಳಿಯ ಆಯುಕ್ತರು ಪ್ರಸ್ತಾಪಿಸುತ್ತಾ, ಮೇಲೆ ಕ್ರಮಾಂಕ (4)ರಲ್ಲಿ ನೀಡಿರುವ ಸರ್ಕಾರದ ಅನುಮೋದನೆಯನ್ನು ಸರ್ಕಾರಿ ಆದೇಶದ ರೂಪದಲ್ಲಿ ನೀಡುವಂತೆ ಮತ್ತು ಆ ಬಗ್ಗೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸುವಂತೆ ಕೋರಿರುತ್ತಾರೆ.

ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶ ಹೊರಡಿಸಲು ನಿರ್ಣಯಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 337 ಕಗೃಮಂ 2011, ಬೆಂಗಳೂರು, ದಿನಾಂಕ : 23–09–2011.**

ಮೇಲಿನ ಪ್ರಸ್ತಾವನೆಗಳ ಹಿನ್ನೆಲೆಯಲ್ಲಿ, ಕರ್ನಾಟಕ ಗೃಹ ಮಂಡಳಿಯು ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ವಡೆಯರಮಂಚನಹಳ್ಳಿ, ಕೋನಸಂದ್ರ ಮತ್ತು ಬೊಮ್ಮಂಡಳ್ಳಿ, ಗ್ರಾಮಗಳಲ್ಲಿ ಸುಮಾರು 200 ಎಕರೆ ಜಮೀನಿನಲ್ಲಿ ಮೆ: ವೈಷ್ಣವಿ ಡೆವಲಪರ್ಸ್, ಬೆಂಗಳೂರು ರವರೊಂದಿಗೆ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಹಮ್ಮಿಕೊಳ್ಳುವ ಬಗ್ಗೆ ಒಪ್ಪಂದ ಮಾಡಿಕೊಳ್ಳಲು ಮತ್ತು ಜಮೀನುಗಳನ್ನು ಮಂಡಳಿಗೆ ಹಸ್ತಾಂತರಿಸಿಕೊಳ್ಳಲು ದಿನಾಂಕ: 21–07–2010ರ ಮಂಡಳಿ ಸಭೆ ವಿಷಯ ಸಂಖ್ಯೆ: 21 ರಲ್ಲಿ ಕೈಗೊಂಡಿರುವ ನಿರ್ಣಯಕ್ಕೆ ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಪಾರ್ವತಿ**

ಪಿ.ಆರ್. 2505 ಪೀಠಾಧಿಕಾರಿ–3, ವಸತಿ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಸಚಿವಾಲಯ

**ವಿಷಯ :** 2011-12ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯಾವಾದಿಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ ಆದೇಶ

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ ಲಾ 32 ಎಲ್‌ಸಿಎಲ್ 1982 ದಿನಾಂಕ 17/18-03-1983 ಮತ್ತು ತಿದ್ದುಪಡಿ ದಿನಾಂಕ: 30-10-1996ರ ಅಧಿಸೂಚನೆ ಸಂಖ್ಯೆ: ಲಾ 112 ಎಲ್‌ಸಿಎಲ್ 1996.

2) ನಿಯಮಗಳ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಲಾ 120 ಎಲ್‌ಸಿಎಲ್ 2007, ದಿನಾಂಕ 18-02-2008 ಮತ್ತು ಸೇರ್ಪಡೆ ದಿನಾಂಕ: 16-05-2008.

3) ಅಧಿಸೂಚನೆ ಸಂಖ್ಯೆ: ಕಂಇ 59 ಭೂದಾಪು 2008 ದಿನಾಂಕ: 26-12-2009.

**ಪ್ರಸ್ತಾವನೆ :**

ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಖರೀದಿಸಲು ದಿ ಕರ್ನಾಟಕ ಗ್ರಾಂಟ್-ಇನ್-ಏಡ್-ಟುಇಬಾರ್ ಅಸೋಸಿಯೇಷನ್ ರೂಲ್ಸ್ 1983ನ್ನು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ 17/18-03-1983ರಲ್ಲಿ ರಚಿಸಲಾಗಿದೆ ಮತ್ತು ಇದಕ್ಕೆ ಹಂತ ಹಂತವಾಗಿ - ತಿದ್ದುಪಡಿ ತರಲಾಗಿದ್ದು, ದಿನಾಂಕ: 30-10-1996ರ ಅಧಿಸೂಚನೆಯಲ್ಲಿ ಆಯಾ ಜಿಲ್ಲೆಯ ಪ್ರಧಾನ/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗೆ ಪ್ರತ್ಯಾಯೋಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 18-02-2008 ಮತ್ತು ಸೇರ್ಪಡೆ ದಿನಾಂಕ 16-05-2008ರನ್ವಯ (ತಿದ್ದುಪಡಿ) ನಿಯಮಗಳು, 2007 ದಿನಾಂಕ: 18-02-2008 ರಿಂದ ಜಾರಿಗೆ ಬಂದಿದೆ. ಅದರಂತೆ ಹಣ ಬಿಡುಗಡೆಗಾಗಿ ರಾಜ್ಯದಲ್ಲಿನ ವಿವಿಧ ವಕೀಲರ ಸಂಘಗಳು ಸಹಾಯಾನುಧಾನ ಬಿಡುಗಡೆಗಾಗಿ ಒತ್ತಾಯಿಸಿವೆ.

ಮೇಲೆ (3)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ 26-12-2009ರಲ್ಲಿ ಗುಲ್ಬರ್ಗಾ ಜಿಲ್ಲೆಯ ಸರಹದ್ದಿನಿಮದ ಯಾದಗಿರಿ, ಶೋರಾಪುರ, ಷರಾಪುರ ತಾಲ್ಲೂಕುಗಳೊಂದಿಗೆ ವಿಭಜನೆಗೊಂಡು ದಿನಾಂಕ 30-12-2009 ರಿಂದ ಜಾರಿಗೆ ಬರುವಂತೆ ಹೊಸದಾಗಿ ಯಾದಗಿರಿ ಜಿಲ್ಲೆ ರಚನೆಯಾಗಿದ್ದು, ಅದರಂತೆ ಉಲ್ಲೇಖ (2)ರನ್ವಯ ಜಿಲ್ಲಾ ಮಟ್ಟಕ್ಕೆ ನಿಗದಿಪಡಿಸಲಾಗಿರುವ ಮೊತ್ತವನ್ನು ಯಾದಗಿರಿ ಜಿಲ್ಲೆಗೆ ಪರಿಗಣಿಸಿದೆ.

2011-12ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2014-00-114-0-01-059 ಇತರೆ ಖರ್ಚು (ಯೋಜನೇತರ) ಅಡಿಯಲ್ಲಿ ರೂ. 50.00 ಲಕ್ಷಗಳನ್ನು ಒದಗಿಸಿದೆ. ಅದರಲ್ಲಿ ರಾಜ್ಯದ ವಕೀಲರ ಸಂಘಗಳಿಗೆ ನಿಯಮಾನುಸಾರ ಸಹಾಯಾನಿದಾನವನ್ನು ಅಡ್ವೊಕೇಟ್ ಜನರಲ್‌ರವರ ಮೂಲಕ ಆಯಾ ಜಿಲ್ಲೆಯ ಸಕ್ಷಮ ಪ್ರಾಧಿಕಾರಗಳಿಗೆ ನಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಸಹಮತಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 131 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 10-10-2011.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯದಲ್ಲಿ ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಗಳು 1983 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಒಟ್ಟು ರೂ. 41,70,000-00 (ರೂಪಾಯಿ ನಲವತ್ತೊಂದು ಲಕ್ಷದ ಎಪ್ಪತ್ತು ಸಾವಿರ ಮಾತ್ರ) ಮೊತ್ತದ ಸಹಾಯನುದಾನವನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಎಲ್ಲಾ ವಿಭಾಗೀಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ವಕೀಲರ ಸಂಘಗಳಿಗೆ ಸಂಬಂಧಪಟ್ಟಂತೆ ಸಕ್ಷಮ ಪ್ರಾಧಿಕಾರಗಳು ಅಂದರೆ ಆಯಾ ಜಿಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶು/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳು ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ವಕೀಲರ ಸಂಘಗಳಿಂದ ವರದಿಯೊಂದಿಗೆ ಅರ್ಜಿಗಳನ್ನು ಪಡೆದು ಪರಿಶೀಲಿಸಿ ಈ ಕೆಳಗೆ ನಿಗದಿಪಡಿಸಲಾಗಿರುವಂತೆ ಮಂಜೂರು ಮಾಡಬಹುದು ಮತ್ತು ಆರ್ಥಿಕ ಇಲಾಖೆಯು ಆಗಿಂದಾಗ್ಗೆ ಹೊರಡಿಸಿರುವ ಮಾರ್ಗಸೂಚಿಗಳ ಅನ್ವಯ ನಿಗದಿತ ಕಾಲಮಿತಿಯೊಳಗೆ ಸಂಬಂಧಪಟ್ಟ ಖಜಾನೆಗಳಿಗೆ ಬಿಲ್‌ಗಳನ್ನು ಸಲ್ಲಿಸಿ ಹನ ಪಡೆಯತಕ್ಕದ್ದು.

- ತಾಲ್ಲೂಕು ಮಟ್ಟದ ವಕೀಲರ ಸಂಘ – ರೂ. 20,000-00
- ಜಿಲ್ಲಾ ಮಟ್ಟದ ವಕೀಲರ ಸಂಘ – ರೂ. 35,000-00
- ವಿಭಾಗೀಯ ಮಟ್ಟದ ವಕೀಲರ ಸಂಘ – ರೂ. 50,000-00
- ಬೆಂಗಳೂರು ವಕೀಲರ ಸಂಘ – ರೂ. 1,25,000-00

ಹಿಂದಿನ ಸಾಳಿನಲ್ಲಿ ಸಹಾಯಾನುದಾನ ಪಡೆದಿದ್ದಾಗ್ಯೂ ಸಹಾಯಾನುದಾನ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸದೇ ವಕೀಲರುಗಳ ಸಂಘಗಳಿಂದ ಉಪಯೋಗಿತ ಪ್ರಮಾಣಪತ್ರ ಪಡೆದು, ಪ್ರಸಕ್ತ, ಸಾಲಿನ ಸಹಾಯಾನುದಾನ ಬಿಡುಗಡೆ ಷರತ್ತಿಗೆ ಈ ಆದೇಶ ಒಳಪಟ್ಟಿದೆ.

ಪ್ರಸಕ್ತ ಆರ್ಥಿಕ ವರ್ಷದ ನಂತರ ಆ ಸಾಲಿನ ಅನುದಾನ ಬಿಡುಗಡೆಗಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗದು. ಆರ್ಥಿಕ ವರ್ಷ ಮುಗುದ ಕೂಡಲೆ ಈ ಉದ್ದೇಶಕ್ಕಾಗಿ ಸಕ್ಷಮ ಪ್ರಾಧಿಕಾರಿಗಳು ಬಿಡುಗಡೆ ಮಾಡಿದ ಮತ್ತು ಅದ್ಯರ್ಪಣೆ ಮಾಡಿದ ವಿವರಗಳನ್ನು ಸರ್ಕಾಕ್ಕೆ ತಪ್ಪದೇ ಸಲ್ಲಿಸುವುದು.

ಈ ಸಹಾಯಾನುದಾನವನ್ನು ಅಡ್ವೋಕೇಟ್ ಜನರಲ್‌ರವರ ಮೂಲಕ ಲೆಕ್ಕ ಶೀರ್ಷಿಕೆ 2014-00-114-0-01-059 ಇತರೆ ಖರ್ಚು (ಯೋಜನೇತರ) ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಅಇ 17 ವೆಚ್ಚ-10/2011, ದಿನಾಂಕ 11-04-2011 ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ವನಇ 230 ಆಂಆಸ 2011, ದಿನಾಂಕ 31-05-2011 ರಲ್ಲಿ ನೀಡಲಾಗಿರುವ ಸಹಮತಿಯನ್ವಯ, ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿರುವ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008 ದಿನಾಂಕ: 16-05-2008ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಅನುಬಂಧ

**ಸರ್ಕಾರದ ಆದೇಶ ಸಂಖ್ಯೆ : ಲಾ 131 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 10–10–2011.**

ವಿವಿಧ ಮಟ್ಟದ ವಕೀಲರ ಸಂಘಗಳಿಗೆ 2011–12ನೇ ಸಾಲಿಗೆ ಬಿಡುಗಡೆ ಮಾಡಬೇಕಾದ ಅನುದಾನದ ವಿವರಗಳು

| ಕ್ರಮ ಸಂಖ್ಯೆ | ಜಿಲ್ಲೆ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆ ಗೊಳಿಸಬೇಕಾದ ಮೊತ್ತ |
|---|---|---|---|---|
| | | ಜಿಲ್ಲಾ/ಮಟ್ಟದ ವಿಭಾಗ ವಕೀಲರು ಸಂಘಗಳು | ತಾಲ್ಲೂಕು ಮಟ್ಟದ ವಕೀಲರ ಸಂಘಗಳು | |
| 1 | 2 | 3 | 4 | 5 |
| 1. | ಬೆಂಗಳೂರು ನಗರ ವಕೀಲರ ಸಂಘ | – | 1 | 1,45,000-00 |
| 2. | ಬೆಂಗಳೂರು (ಗ್ರಾಮಾಂತರ) | – | 4 | 80,000-00 |
| 3. | ರಾಮನಗರ ಜಿಲ್ಲೆ | 1 | 3 | 95,000-00 |
| 4. | ಕೋಲಾರ | 1 | 6 | 1,55,000-00 |
| 5. | ಚಿಕ್ಕಬಳ್ಳಾಪುರ | 1 | 4 | 1,15,000-00 |
| 6. | ತುಮಕೂರು | 1 | 9 | 2,15,000-00 |
| 7 | ಮೈಸೂರು | 1(ವಿ.ಮ) | 6 | 1,70,000-00 |
| 8. | ಚಾಮರಾಜನಗರ | 1 | 3 | 95,000-00 |
| 9. | ಮಂಡ್ಯ | 1 | 6 | 1,55,000-00 |
| 10 | ಹಾಸನ | 1 | 7 | 1,75,000-00 |
| 11. | ಶಿವಮೊಗ್ಗ | 1 | 6 | 1,55,000-00 |
| 12. | ಚಿಕ್ಕಮಗಳೂರು | 1 | 6 | 1,55,000-00 |
| 13. | ಚಿತ್ರದುರ್ಗ | 1 | 5 | 1,35,000-00 |
| 14. | ದಾವಣಗೆರೆ | 1 | 5 | 1,35,000-00 |
| 15. | ಬಳ್ಳಾರಿ | 1 | 6 | 1,55,000-00 |
| 16. | ಬೆಳಗಾಂ | 1 (ವಿ.ಮ) | 11 | 2,70,000-00 |
| 17. | ಬಿಜಾಪುರ | 1 | 4 | 1,15,000-00 |
| 18. | ಬಾಗಲಕೋಟೆ | 1 | 6 | 1,55,000-00 |
| 19. | ಧಾರವಾಡ | 1 | 3 | 95,000-00 |
| 20. | ಹಾವೇರಿ | 1 | 6 | 1,55,000-00 |
| 21. | ಗದಗ್ | 1 | 4 | 1,15,000-00 |
| 22. | ಉತ್ತರ ಕನ್ನಡ | 1 | 11 | 2,55,000-00 |
| 23. | ಬೀದರ್ | 1 | 4 | 1,15,000-00 |
| 24. | ಗುಲ್ಬರ್ಗ | 1(ವಿ.ಮ) | 7 | 1,90,000-00 |
| 25. | ಯಾದಗಿರಿ | 1 | 2 | 75,000-00 |
| 26. | ರಾಯಚೂರು | 1 | 4 | 1,15,000-00 |
| 27. | ಕೊಪ್ಪಳ | 1 | 3 | 95,000-00 |
| 28. | ದಕ್ಷಣ ಕನ್ನಡ | 1 | 5 | 1,35,000-00 |
| 29. | ಉಡುಪಿ | 1 | 2 | 75,000-00 |
| 30 | ಕೊಡಗು | 1 | 2 | 75,000-00 |
| | ಒಟ್ಟು | | | 41,70,000-00 |

**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 2506

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎನ್.ಎಸ್. ಅಂಕಲಗಿ, ಪ್ರ.ದ.ಸ. ರವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : ಸಿಬ್ಬಂದಿ–5/304/1993–94 ದಿನಾಂಕ : 30–6–2008 ಮತ್ತು 22–8–2011.

**ಪ್ರಸ್ತಾವನೆ :**

ಶ್ರೀ ಎನ್.ಎಸ್. ಅಂಕಲಗಿ ರವರು ಅನುಕಂಪದ ಆಧಾರದಲ್ಲಿ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನೇಮಕಾತಿ ಹೊಂದಿ ದಿನಾಂಕ : 11–12–1989 (ಪೂರ್ವಾಹ್ನ) ರಂದು CID, CRE Cell, ರಂದು ನಲ್ಲಿ ವರದಿ ಮಾಡಿಕೊಂಡಿದ್ದು, ನಿಗಧಿತ ಅವಧಿಯೊಳಗೆ ಇಲಾಖಾ ಪರೀಕ್ಷೆಗಳ ಪೈಕಿ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವುದಿಲ್ಲ. ನಂತರ ದಿನಾಂಕ : 11–12–1991 ರಿಂದ 10–12–1992 ರವರೆಗೆ ಸದರಿಯವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಣೆ ಮಾಡಲಾಗಿರುತ್ತದೆ. ಈ ಅವಧಿಯಲ್ಲೂ ಸಹ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಿಲ್ಲ. ದಿನಾಂಕ : 20–7–1995 ರಿಂದ ಸದರಿಯವರು ಕರ್ತವ್ಯಕ್ಕೆ ಗೈರು ಹಾಜರಾದ್ದರಿಂದ ಹಾಗೂ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾಗದೇ ಇದ್ದುದರಿಂದ ಅವರನ್ನು ಸೇವೆಯಿಂದ ಡಿಸ್ಚಾರ್ಜ್‌ಗೊಳಿಸುವ ಬಗ್ಗೆ, ಕಮೀಷನರ್ ಆಫ್ ಪೊಲೀಸ್, ಹುಬ್ಬಳ್ಳಿ–ಧಾರವಾಡ ರವರು ಡಿ.ಜಿಪಿ ಕಛೇರಿಯಿಂದ ಅನುಮೋದನೆಯನ್ನು ಕೋರಿ, ಈ ಬಗ್ಗೆ ಡಿ.ಜಿ.ಪಿ. ಕಛೇರಿಯವರು ದಿನಾಂಕ : 22–5–1996 ರಲ್ಲಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆಂದು ತಿಳಿಸಿದ್ದು, ಈ ಬಗ್ಗೆ ಅಂತಿಮ ನಿರ್ಣಯ ತೆಗೆದುಕೊಳ್ಳುವ ಮೊದಲೇ ಸದರಿ ನೌಕರರು, ವೈದ್ಯಕೀಯ ಪ್ರಮಾಣ ಪತ್ರ ಒದಗಿಸಿ ಕರ್ತವ್ಯಕ್ಕೆ ದಿನಾಂಕ : 17–6–1996 ರಂದು ವರದಿ ಮಾಡಿಕೊಂಡಿರುತ್ತಾರೆ. ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ

ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿರುತ್ತಾರೆ. ಈ ಬಗ್ಗೆ ಸದರಿಯವರು ಮೇಲ್ಮನವಿ ಸಲ್ಲಿಸಿರುವುದರಿಂದ ಇದೇ ಶಿಕ್ಷೆಯನ್ನು ಪುನರುಚ್ಚರಿಸಿರುತ್ತಾರೆ ಹಾಗೂ ಇವರ ಮೇಲಿನ ಶಿಸ್ತು ಕ್ರಮವನ್ನು ಕೈಬಿಡಲಾಗಿದೆ ಎಂದು ತಿಳಿಸಿರುತ್ತಾರೆ.

ಶ್ರೀ ಎನ್.ಎಸ್. ಅಂಕಲಗಿ, ಪ್ರಥಮ ದರ್ಜೆ ಸಹಾಯಕ ರವರು ಕರ್ತವ್ಯಕ್ಕೆ ಗೈರು ಹಾಜರಾದ ಅವಧಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಪಡೆದು ಹಾಜರಾಗಿರುತ್ತಾರೆ. ಗೈರು ಹಾಜರಿದ್ದ ಅವಧಿಯಲ್ಲಿ ಇಲಾಖಾ ಪರೀಕ್ಷೆಯಾದ ಅಕೌಂಟ್ಸ್ ಹೈಯರ್ಸ್‌ನಲ್ಲಿ ಉತ್ತೀರ್ಣರಾಗಿರುತ್ತಾರೆ. ವೈದ್ಯಕೀಯ ಪ್ರಮಾಣ ಪತ್ರವನ್ನು ಪರಿಶೀಲಿಸಲಾಗಿದೆ. ಅವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಅಂತಿಮಗೊಳ್ಳದ ಪ್ರಯುಕ್ತ ಅವರ ಪರಿವೀಕ್ಷಣ ಅವಧಿಯನ್ನು ಇತ್ಯರ್ಥಪಡಿಸಲು ಯಾವುದೇ ಕ್ರಮವನ್ನು ತೆಗೆದುಕೊಳ್ಳದೆ ಅವರನ್ನು ಸೇವೆಯಲ್ಲಿ ಮುಂದುವರೆಸಲಾಗಿರುವುದಾಗಿ ಹಾಗೂ ಸದರಿಯವರ ಮೇಲಿನ ಇಲಾಖಾ ವಿಚಾರಣೆಯು ದಿನಾಂಕ : 11-2-98 ರಿಂದ ಈವರೆವಿಗೂ ಯಾವುದೇ ಪ್ರಗತಿಯಾಗದೇ ಇರುವುದರಿಂದ ಮತ್ತು ಸದರಿ ವಿಚಾರಣಾ ಅಧಿಕಾರಿಯನ್ನು ನೇಮಿಸುವ ಮುನ್ನ ನಿಯಮಗಳ ಅನುಸಾರ ದೋಷಾರೋಪಣೆಯನ್ನು ನೀಡದೆ ವಿಚಾರಣೆಗೆ ಆದೇಶ ಮಾಡಿರುವುದರಿಂದ ಸದರಿ ಆದೇಶವನ್ನು ರದ್ದುಗೊಳಿಸಲು ಮತ್ತು ಅವರ ವಿರುದ್ಧ ಹೊಸದಾಗಿ ಇಲಾಖಾ ವಿಚಾರಣೆಗೆ ಆದೇಶ ಮಾಡಲಾಗುತ್ತಿದೆ.

ಈ ವಿಚಾರಣೆ ಪೂರ್ಣಗೊಳ್ಳಲು ಗರಿಷ್ಟ 6 ತಿಂಗಳ ಸಮಯ ಬೇಕಾಗಿರುತ್ತದೆ. ಅಲ್ಲದೆ, ಸದರಿಯವರು ತಮ್ಮನ್ನು ಪ್ರ.ದ.ಸ. ಹುದ್ದೆಯಲ್ಲಿ ಸಕ್ರಮಗೊಳಿಸಲು ಮಾನ್ಯ ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ : 1630/2008 ಅನ್ನು ದಾಖಲು ಮಾಡಿರುತ್ತಾರೆ. ಆದ್ದರಿಂದ, ಅವರ ಖಾಯಂ ಪೂರ್ವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1)(1) ಪ್ರಕಾರ ದಿನಾಂಕ ; 11-12-1992 ರಿಂದ 31-12-2008 ರವರೆಗೆ ವಿಸ್ತರಿಸಬೇಕೆಂದು ಹಾಗೂ ಇವರ ಮೇಲಿನ ಆರೋಪಗಳನ್ನು ಕೈಬಿಡಲಾಗಿರುವುದರಿಂದ ದಿನಾಂಕ : 20-7-1995 ರಿಂದ 16-6-1996 ರವರೆಗೆ ಅನಧಿಕೃತ ಗೈರು ಹಾಜರಾತಿಯನ್ನು ವೈದ್ಯಕೀಯ ನೆಲೆಯಲ್ಲಿ ಅಸಾಧಾರಣ ರಜೆಯನ್ನಾಗಿ ಪರಿಗಣಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 66 ಪೊಸಿಲಿ 2008, ಬೆಂಗಳೂರು, ದಿನಾಂಕ : 13-10-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1) (i) ರನ್ವಯ ಶ್ರೀ ಎನ್.ಎಸ್. ಅಂಕಲಗಿ ಪ್ರ.ದ.ಸ. ರವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 11-12-1992 ರಿಂದ 31-12-2008 ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2510

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು).

## ಒಳಾಡಳಿತ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಭದ್ರತಾ ವಿಭಾಗವನ್ನು ಸಮನ್ವಯೀಕರಣಗೊಳಿಸುವ (Rationalization) ಬಗ್ಗೆ

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 01 ಪಿಓಪಿ 2005 (ಭಾ), ದಿನಾಂಕ : 21-5-2005.
2. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 259 ಪಿಓಪಿ 2007, ದಿನಾಂಕ : 18-3-2008.
3. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 181 ಪಿಓಪಿ 2010, ದಿನಾಂಕ : 10-2-2010.
4. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 106 ಪಿಓಪಿ 2011, ದಿನಾಂಕ : 20-7-2011.
5. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 0215 ಪಿಓಪಿ 2007, ದಿನಾಂಕ : 28-2-2008.
6. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 05 ಪಿಓಪಿ 2011, ದಿನಾಂಕ : 14-1-2011.
7. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 137 ಪಿಓಪಿ 2011, ದಿನಾಂಕ : 5-8-2011.
8. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 208 ಪಿಓಪಿ 2008, ದಿನಾಂಕ : 12-12-2008.
9. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 220 ಪಿಓಪಿ 2009, ದಿನಾಂಕ : 14-9-2009.
10. ಪ್ರಧಾನ ಕಾರ್ಯದರ್ಶಿ ಇವರ ಅಧ್ಯಕ್ಷತೆಯಲ್ಲಿ ದಿನಾಂಕ : 2-9-2011 ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :**

**ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ, ರಾಜ್ಯದ ನಕ್ಸಲೈಟ್ ಚಟುವಟಿಕೆಗಳ ನಿಗ್ರಹಕ್ಕಾಗಿ ಆ್ಯಂಟಿ ನಕ್ಸಲೈಟ್ ಫೋರ್ಸ್** (Anti Naxallite Force) **ನ್ನು ಸ್ಥಾಪಿಸಿ ಒಟ್ಟು ವಿವಿಧ ವೃಂದದ 543 ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಿದೆ.**

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ, ಕರ್ನಾಟಕ ರಾಜ್ಯ ಕರಾವಳಿ ಪ್ರದೇಶದಲ್ಲಿ ಮೊದಲ ಹಂತದಲ್ಲಿ ಕರಾವಳಿ ಕಾವಲು ಪಡೆಯನ್ನು ರಚಿಸಿ ಮಂಗಳೂರು, ಮಲ್ಪೆ, ಕುಮಟಾ, ಕಾರವಾರ ಮತ್ತು ಭಟ್ಕಳಗಳಲ್ಲಿ ಪೊಲೀಸ್ ಠಾಣೆಗಳನ್ನು ಮಂಜೂರು ಮಾಡಿ ಈ ಸಂಬಂಧ ಒಟ್ಟು ವಿವಿಧ ವೃಂದದ 329 ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಿದೆ. ತದನಂತರ ಮೇಲೆ ಓದಲಾದ (3)ರ ಸರ್ಕಾರಿ ಆದೇಶದಲ್ಲಿ ಕರಾವಳಿ ಪೊಲೀಸ್ ಘಟಕಕ್ಕೆ 15 ರೇಡಿಯೋ ಆಪರೇಟರ್ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಿದೆ ಹಾಗೂ ಮೇಲೆ ಓದಲಾದ (4)ರ ಸರ್ಕಾರಿ ಆದೇಶದಲ್ಲಿ ಎರಡನೇ ಹಂತದಲ್ಲಿ ಕರಾವಳಿ ಕಾವಲು ಪಡೆಯನ್ನು ರಚಿಸಿ ಹೆಜಮಾಡಿ, ಗಂಗೊಳ್ಳಿ (ಕುಂದಾಪುರ), ಹೊನ್ನಾವರ ಮತ್ತು ಅಂಕೋಲಾ (ಬೇಲೇಕೇರಿ) ಗಳಲ್ಲಿ ಪೊಲೀಸ್ ಠಾಣೆಗಳನ್ನು ಮಂಜೂರು ಮಾಡಿ ಇವುಗಳಿಗೆ ವಿವಿಧ ವೃಂದದ 110 ಹುದ್ದೆಗಳನ್ನು ಸೃಜಿಸಿ ಮಂಜೂರು ಮಾಡಿದೆ.

ಮೇಲೆ ಓದಲಾದ (5) ರ ಸರ್ಕಾರಿ ಆದೇಶದಲ್ಲಿ, ಬೆಂಗಳೂರು ನಗರದ ಪೊಲೀಸ್ ಘಟಕದಲ್ಲಿ ಭಯೋತ್ಪಾದಕ ಹಾಗೂ ಉಗ್ರಗಾಮಿಗಳ ದಮನಕ್ಕಾಗಿ ಬೆಂಗಳೂರು ನಗರ ಪೊಲೀಸ್ ಆಯುಕ್ತರ ಕಛೇರಿಯಲ್ಲಿರುವ ವಿಶೇಷ ಶಾಖೆಯಲ್ಲಿ ಒಂದು ಪ್ರತ್ಯೇಕ ಭಯೋತ್ಪಾದನೆ ಹಾಗೂ ನಕ್ಸಲ್ ನಿಗ್ರಹ ದಳ ಕೋಶವನ್ನು ಸ್ಥಾಪಿಸಿ ಒಟ್ಟು ವಿವಿಧ ವೃಂದದ 318 ಹುದ್ದೆಗಳನ್ನು ಮಂಜೂರು ಮಾಡಿದೆ.

ಮೇಲೆ ಓದಲಾದ (6)ರ ಸರ್ಕಾರಿ ಆದೇಶದಲ್ಲಿ, ಭಯೋತ್ಪಾದಕರು ಹಾಗೂ ನಕ್ಸಲೀಯರ ಭಯೋತ್ಪಾದಕ ಚಟುವಟಿಕೆಗಳನ್ನು ಹಾಗೂ ವಿಧ್ವಂಸಕ ಕೃತ್ಯಗಳನ್ನು ತಡೆಗಟ್ಟಲು ಕರ್ನಾಟಕ ಸ್ಟೇಟ್ ಇಂಡಸ್ಟ್ರೀಯಲ್ ಸೆಕ್ಯುರಿಟಿ ಫೋರ್ಸ್ (KSISF) ನ್ನು ಸ್ಥಾಪಿಸಿ ಮೊದಲನೇ ಬೆಟಾಲಿಯನ್‌ಗೆ ವಿವಿಧ ವೃಂದದ 1060 ಹುದ್ದೆಗಳನ್ನು ಮಂಜೂರು ಮಾಡಿದೆ. ತದನಂತರ ಮೇಲೆ ಓದಲಾದ (7)ರ ಸರ್ಕಾರಿ ಆದೇಶದಲ್ಲಿ 2 ಮತ್ತು 3 ನೇ ಬೆಟಾಲಿಯನ್ ಸ್ಥಾಪಿಸಿ ಕ್ರಮವಾಗಿ ವಿವಿಧ ವೃಂದದ 1060 ಹುದ್ದೆಗಳಂತೆ ಒಟ್ಟು 2120 ಹುದ್ದೆಗಳನ್ನು ಮಂಜೂರು ಮಾಡಿದೆ.

ಮೇಲೆ ಓದಲಾದ (8)ರ ಸರ್ಕಾರಿ ಆದೇಶದಲ್ಲಿ, ರಾಷ್ಟ್ರೀಯ ಭದ್ರತಾ ದಳಕ್ಕೆ ಸಮಾನವಾದ ಕಮಾಂಡೋಗಳು ಮತ್ತು ತ್ವರಿತ ಪ್ರಹಾರ ದಳವನ್ನು ಒಳಗೊಂಡ ರಾಜ್ಯಮಟ್ಟದಲ್ಲಿ ಪ್ರತ್ಯೇಕವಾದ ಆಂತರಿಕ ಭದ್ರತಾ ವಿಭಾಗವನ್ನು ಸ್ಥಾಪಿಸಿ ವಿವಿಧ ವೃಂದದ ಒಟ್ಟು 475 ಹುದ್ದೆಗಳನ್ನು ಮಂಜೂರು ಮಾಡಿದೆ. ತದನಂತರ ಮೇಲೆ ಓದಲಾದ (9)ರ ಸರ್ಕಾರಿ ಆದೇಶದಲ್ಲಿ, ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 208 ಪಿಓಪಿ 2008, ದಿನಾಂಕ : 12–12–2008 ರಲ್ಲಿ ಮಂಜೂರು ಮಾಡಿರುವ ದ್ವಿ.ದ.ಸ. ಹುದ್ದೆಗಳಲ್ಲಿ 05 ಹುದ್ದೆಗಳನ್ನು ಬೆರಳಚ್ಚುಗಾರರ ಹುದ್ದೆಗಳನ್ನಾಗಿ ಪರಿವರ್ತಿಸಿದೆ.

ಮೇಲೆ ಓದಲಾದ (10)ರ ನಡವಳಿಯಲ್ಲಿ, ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ : 2–9–2011ರಲ್ಲಿ ನಡೆದ ಸಭೆಯಲ್ಲಿ ಈ ಮೇಲ್ಕಂಡ ಎಲ್ಲಾ ಭದ್ರತಾ ವಿಭಾಗಗಳನ್ನು ಇನ್ನೂ ಹೆಚ್ಚು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವಂತಾಗಲು ಒಂದೇ ಸೂರಿನಡಿ ತಂದು ಈಗ ಇರುವ ರಾಜ್ಯದ ಆಂತರಿಕ ಭದ್ರತಾ ವಿಭಾಗದ ವ್ಯಾಪ್ತಿಗೆ ತರಲು ನಿರ್ಣಯ ಕೈಗೊಂಡಿದೆ. ಮತ್ತು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಸಮಾನಾಂತರ ಹುದ್ದೆಯ ನೇತೃತ್ವದಲ್ಲಿ ಇದರ ಉಸ್ತುವಾರಿ ಮತ್ತು ನಿಯಂತ್ರಣವನ್ನು ವಹಿಸಬೇಕೆಂದು ಸಹ ನಿರ್ಣಯ ಕೈಗೊಂಡಿದೆ. ಈ ಹಿನ್ನೆಲೆಯಲ್ಲಿ ಮೇಲಿನ ಎಲ್ಲಾ ಭದ್ರತಾ ವಿಭಾಗಗಳನ್ನು ಒಂದೇ ಸೂರಿನಡಿ ತರುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 190 ಪಿಓಪಿ 2011, ಬೆಂಗಳೂರು, ದಿನಾಂಕ : 26–9–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಆ್ಯಂಟಿ ನಕ್ಸಲೈಟ್ ಫೋರ್ಸ್ (Anti Naxallite Force), ಕರಾವಳಿ ಕಾವಲು ಪಡೆ ಹಂತ–1 ಮತ್ತು ಹಂತ–2, ಭಯೋತ್ಪಾದನೆ ನಿಗ್ರಹ ದಳ ಕೋಶ (ATC), ಕರ್ನಾಟಕ ಸ್ಟೇಟ್ ಇಂಡಸ್ಟ್ರೀಯಲ್ ಸೆಕ್ಯುರಿಟಿ ಫೋರ್ಸ್ (KSISF) ಮತ್ತು ರಾಜ್ಯದ ಆಂತರಿಕ ಭದ್ರತಾ ವಿಭಾಗ ಈ ಎಲ್ಲಾ ಘಟಕಗಳನ್ನು ಹುದ್ದೆ ಮತ್ತು ಉಪಕರಣಗಳೊಂದಿಗೆ ಒಂದೇ ಸೂರಿನಡಿ ತಂದು ಕರ್ನಾಟಕ ರಾಜ್ಯ ಆಂತರಿಕ ಭದ್ರತಾ ವಿಭಾಗದ ನೇರ ನಿಯಂತ್ರಣಕ್ಕೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ತರಲಾಗಿದೆ. ಮತ್ತು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಸಮಾನಾಂತರ ಹುದ್ದೆಯ ನೇತೃತ್ವದಲ್ಲಿ ಇದರ ಉಸ್ತುವಾರಿ ಮತ್ತು ನಿಯಂತ್ರಣ ಮಾಡತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಆಇ 1 ಟಿಎಫ್‌ಸಿ 96, ದಿನಾಂಕ : 10–7–1996ರ ಐಟಂ ಸಂಖ್ಯೆ : 53 ರಲ್ಲಿನ ಷರತ್ತುಗಳಿಗೊಳಪಟ್ಟು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಜಮ್ಮ**

ಪಿ.ಆರ್. 2511

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಪೊಲೀಸ್ ವೆಚ್ಚ).

## ಒಳಾಡಳಿತ ಸಚಿವಾಲಯ

ವಿಷಯ : ಶ್ರೀ ಎನ್. ನಾರಾಯಣಸ್ವಾಮಿ, ಹಿಂದೆ ಪಿ.ಐ., ಹಾಲಿ ಡಿವೈ.ಎಸ್.ಪಿ. ರವರ ವಿರುದ್ಧ ನಡೆದ ಲೋಕಾಯುಕ್ತ ದಾಳಿ ಪ್ರಕರಣಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಗೆ ಆದೇಶಿಸುವ ಬಗ್ಗೆ.

ಓದಲಾಗಿದೆ : ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : ಸಿಬಿ(5)26/2011–12 ದಿನಾಂಕ : 3–8–2011.

ಪ್ರಸ್ತಾವನೆ :

ಮೇಲೆ ಓದಲಾದ ಪತ್ರದಲ್ಲಿ ಶ್ರೀ ಎನ್. ನಾರಾಯಣಸ್ವಾಮಿ, ಹಿಂದೆ ಪೊಲೀಸ್ ಇನ್ಸ್‌ಪೆಕ್ಟರ್, ಹಾಲಿ ಡಿವೈ.ಎಸ್.ಪಿ. ರವರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂಬ ಕಾರಣಕ್ಕಾಗಿ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ, ಬೆಂಗಳೂರು ರವರು ದಿನಾಂಕ : 13–3–2006 ರಂದು ಮೊ.ಸಂ. 09/06 ಕಲಂ 13(1)(ಇ) ಸಹ ಕಲಂ 13(2) ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ರಡಿಯಲ್ಲಿ ಪ್ರಕರಣ ದಾಖಲು ಮಾಡಿರುತ್ತಾರೆ. ಸದರಿ ಪ್ರಕರಣದಲ್ಲಿ ಶ್ರೀ ಎನ್. ನಾರಾಯಣಸ್ವಾಮಿ, ಹಾಲಿ ಡಿವೈ.ಎಸ್.ಪಿ. ರವರು ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ, ಬೆಂಗಳೂರು ರವರ ವರದಿ ದಿನಾಂಕ : 11–11–2008 ರಿಂದ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಕೆ.ಎಸ್.ಪಿ. (ಡಿಪಿ) ನಿಯಮ 6 ರಡಿಯಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿ ಶ್ರೀ ಚಂದ್ರಮೋಹನ್ ಸಿಂಗ್, ಪೊಲೀಸ್ ಅಧೀಕ್ಷಕರು, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಡಿವೈ.ಎಸ್.ಪಿ. ಪಿ.ಆರ್.ಸಿ. ಪ್ರಧಾನ ಕಛೇರಿ ರವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡುವಂತೆ ಕೋರಿ, ಸದರಿಯವರ ವಿರುದ್ಧ ಹೊರಿಸಬಹುದಾದ ಆರೋಪಗಳ ಬಗ್ಗೆ ಕರಡು ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡುವಂತೆ ಪೊಲೀಸ್ ಮಹಾ ನಿರ್ದೇಶಕರು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಕ್ರಿಮಿನಲ್ ಮೊಕದ್ದಮೆಗೆ ಸಂಬಂಧಿಸಿದಂತೆ ಮೇಲ್ನೋಟಕ್ಕೆ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿ ಹೊಂದಿರುವುದು ಸಾಬೀತಾಗಿರುವುದರಿಂದ ಸರ್ಕಾರವು ದಿನಾಂಕ : 15–6–2009 ರಂದು ಅಭಿಯೋಜನಾ ಮಂಜೂರಾತಿಯನ್ನು ನೀಡಿದೆ. ಡಿಜಿ ಮತ್ತು ಐಜಿಪಿ ರವರು ಪ್ರಸ್ತಾಪಿಸಿರುವಂತೆ ಇಲಾಖಾ ಶಿಸ್ತು ಕ್ರಮ ಕೈಗೊಳ್ಳಬಹುದಾಗಿದ್ದು. ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89ರ ನಿಯಮ 6ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಶ್ರೀ ಚಂದ್ರಮೋಹನ್ ಸಿಂಗ್, ಪೊಲೀಸ್ ಅಧೀಕ್ಷಕರು, ರಾಜ್ಯ ಗುಪ್ತ ವಾರ್ತೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಡಿಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಪಿ.ಆರ್.ಸಿ., ಡಿಜಿ ಮತ್ತು ಐ.ಜಿ.ಪಿ. ರವರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ದೋಷಾರೋಪಣಾ ಪಟ್ಟಿಯನ್ನು ಹೊರಡಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 268 ಪೊಸಿಪ 2011, ಬೆಂಗಳೂರು, ದಿನಾಂಕ : 13–10–2011.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಎನ್. ನಾರಾಯಣಸ್ವಾಮಿ, (ಈ ಹಿಂದೆ ಪಿ.ಐ.) ಡಿವೈ.ಎಸ್.ಪಿ. ರವರು ತಮ್ಮ ಬಲ್ಲ ಮೂಲಗಳಿಗಿಂತ ಹೆಚ್ಚಿನ ಪ್ರಮಾಣದ ಆದಾಯ ಹೊಂದಿರುವರೆಂಬ ಆರೋಪದಲ್ಲಿ ಕರ್ನಾಟಕ ಲೋಕಾಯುಕ್ತ ಬೆಂಗಳೂರು ನಗರ ವಿಭಾಗ ಮೊಕದ್ದಮೆ ಸಂಖ್ಯೆ : 9/06 ನ್ನು ದಾಖಲಿಸಿದ್ದು, ದಿನಾಂಕ : 11–11–2008 ರ ಲೋಕಾಯುಕ್ತ ವರದಿಯಂತೆ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಇವರ ವಿರುದ್ಧ

ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರ ನಿಯಮ 6 ರಡಿಯಲ್ಲಿ ಇಲಾಖೆ ವಿಚಾರಣೆಗೆ ಆದೇಶಿಸಿದೆ. ಪ್ರಕರಣದಲ್ಲಿ ಶ್ರೀ ಚಂದ್ರಮೋಹನ್ ಸಿಂಗ್, ಪೊಲೀಸ್ ಅಧೀಕ್ಷಕರು, ರಾಜ್ಯ ಗುಪ್ತ ವಾರ್ತೆ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಡಿವೈ.ಎಸ್.ಪಿ. (ಪಿಆರ್‌ಸಿ) ಐಜಿಪಿ ರವರ ಕಛೇರಿ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಈ ಸಂಬಂಧ ಆರೋಪಿತ ಪೊಲೀಸ್ ಅಧಿಕಾರಿಯವರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಹೊರಡಿಸಲಾಗಿದೆ. ವಿಚಾರಣೆಯನ್ನು ನಿಯಮಾನುಸಾರ ನಡೆಸಿ ಮೂರು ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಟಿ.ಎನ್. ರವಿಪ್ರಕಾಶ್
ಪಿ.ಆರ್. 2512 ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು).

## ಒಳಾಡಳಿತ ಸಚಿವಾಲಯ

ವಿಷಯ : ಶ್ರೀ ಪಿ.ಜಿ. ವಾಂಡಕರ್, ಡಿವೈ.ಎಸ್.ಪಿ. ರವರ ವಿರುದ್ಧ ನಡೆದ ಲೋಕಾಯುಕ್ತ ದಾಳಿ ಪ್ರಕರಣಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಗೆ ಆದೇಶಿಸುವ ಬಗ್ಗೆ.

ಓದಲಾಗಿದೆ : ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : ಸಿಬಿ(5)71/2007–08 ದಿನಾಂಕ : 3–8–2011.

ಪ್ರಸ್ತಾವನೆ :

ಮೇಲೆ ಓದಲಾದ ಪತ್ರದಲ್ಲಿ ಶ್ರೀ ಪಿ.ಜಿ. ವಾಂಡಕರ, ಡಿವೈ.ಎಸ್.ಪಿ. ರವರು ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂಬ ಕಾರಣಕ್ಕಾಗಿ ಪೊಲೀಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಮೈಸೂರು ರವರು ದಿನಾಂಕ : 29–1–2008 ರಂದು ಮೊ.ಸಂ. 02/08 ಕಲಂ 13(1)(ಇ) ಸಹ ಕಲಂ 13(2) ಲಂಚ ನಿರೋಧ ಕಾಯ್ದೆ 1988 ರಡಿಯಲ್ಲಿ ಪ್ರಕರಣ ದಾಖಲಾಗಿರುತ್ತದೆ. ಸದರಿ ಪ್ರಕರಣದಲ್ಲಿ ಶ್ರೀ ಪಿ.ಜಿ. ವಾಂಡಕರ, ಡಿವೈ.ಎಸ್.ಪಿ ರವರು ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ವರದಿ ದಿನಾಂಕ : 11–3–2010 ರಿಂದ ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ, ಇವರ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿ, ಪೊಲೀಸ್ ಅಧೀಕ್ಷಕರು, ಧಾರವಾಡ ಜಿಲ್ಲೆ ರವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, (ಇಲಾಖಾ ವಿಚಾರಣೆಗಳು) ಐಜಿಪಿ ರವರ ಕಛೇರಿ, ಉತ್ತರವಲಯ, ಬೆಳಗಾವಿ ರವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡುವಂತೆ ಕೋರಿ, ಸದರಿಯವರ ವಿರುದ್ಧ ಹೊರಿಸಬಹುದಾದ ಆರೋಪಗಳ ಬಗ್ಗೆ ಕರಡು ದೋಷಾರೋಪಣಾ ಪಟ್ಟಿಯನ್ನು ಹೊರಡಿಸುವಂತೆ ಪೊಲೀಸ್ ಮಹಾ ನಿರ್ದೇಶಕರವರು ಕೋರಿರುತ್ತಾರೆ.

ಅಧಿಕಾರಿಯು ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿ ಹೊಂದಿರುವುದು ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ ಡಿಜಿ ಮತ್ತು ಐಜಿಪಿ ರವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 267 ಪೊಸಿಪ 2011, ಬೆಂಗಳೂರು, ದಿನಾಂಕ : 13–10–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಶ್ರೀ ಪಿ.ಜಿ. ವಾಂಡಕರ, ಡಿವೈ.ಎಸ್.ಪಿ. ರವರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವ ಆರೋಪದಲ್ಲಿ ಕರ್ನಾಟಕ ಲೋಕಾಯುಕ್ತ, ಮೈಸೂರು ರವರು ಮೊ. ಸಂಖ್ಯೆ : 2/2008 ನ್ನು ದಾಖಲಿಸಿದ್ದು, ದಿನಾಂಕ : 11–3–2010 ಎ.ಡಿ.ಜಿ.ಪಿ. ಲೋಕಾಯುಕ್ತ ವರದಿಯಂತೆ ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ ಅಧಿಕಾರಿಯ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರ ನಿಯಮ 6 ರಡಿಯಲ್ಲಿ ಇಲಾಖೆ ವಿಚಾರಣೆಗೆ ಆದೇಶಿಸಿದೆ. ಪ್ರಕರಣದಲ್ಲಿ ಪೊಲೀಸ್ ಅಧೀಕ್ಷಕರು, ಧಾರವಾಡ ಜಿಲ್ಲೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ಡಿವೈ.ಎಸ್.ಪಿ. (ಇಲಾಖೆ ವಿಚಾರಣೆಗಳು) ಐಜಿಪಿ ಉತ್ತರ ವಲಯ, ಬೆಳಗಾವಿ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಈ ಸಂಬಂಧ ಆರೋಪಿತ ಪೊಲೀಸ್ ಅಧಿಕಾರಿಯವರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಹೊರಡಿಸಲಾಗಿದೆ. ವಿಚಾರಣೆಯನ್ನು ನಿಯಮಾನುಸಾರ ನಡೆಸಿ ಮೂರು ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಟಿ.ಎನ್. ರವಿಪ್ರಕಾಶ್
ಪಿ.ಆರ್. 2513 ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು).

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಅರಣ್ಯ ಇಲಾಖೆಯಲ್ಲಿನ ವನಪಾಲಕ ವೃಂದದ ಹುದ್ದೆಯನ್ನು ಉಪ ವಲಯ ಅರಣ್ಯ ಅಧಿಕಾರಿ ಎಂದು ಪುನರ್ ಪದನಾಮೀಕರಿಸುವ ಕುರಿತು.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ : ಅಪಜೀ 366 ಅಅಸೇ 2010, ದಿನಾಂಕ : 20–11–2010.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ : 11–07–2011 ರಂದು ಜರುಗಿದ ವೃಂದ ಪರಿಶೀಲನಾ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಅರಣ್ಯ ಇಲಾಖೆಯ ವನಪಾಲಕರ ಸಂಘವು ವನಪಾಲಕ ವೃಂದವನ್ನು ಉಪ ವಲಯ ಅರಣ್ಯ ಅಧಿಕಾರಿಯೆಂದು ಪುನರ್ ಪದನಾಮೀಕರಿಸುವ ಬೇಡಿಕೆಯನ್ನು ಸರ್ಕಾರದ ಮುಂದಿಟ್ಟಿತು. ಈ ವಿಷಯವನ್ನು ಹಾಗೂ ಅರಣ್ಯ ಇಲಾಖೆಯ ಇತರೆ ಸಂಘಗಳ ಬೇಡಿಕೆಗಳನ್ನು ಮತ್ತು ಅರಣ್ಯ ಶಾಸ್ತ್ರ ಪದವೀಧರರ ಬೇಡಿಕೆಯನ್ನು ಪರಿಗಣಿಸುವ ಕುರಿತು ಪರಿಶೀಲಿಸಲು ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ : 20–11–2010ರ ಆದೇಶದಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿಯೊಂದನ್ನು ರಚಿಸಲಾಗಿತ್ತು. ಸದರಿ ಸಮಿತಿಯು ಇಡೀ ವಿಷಯವನ್ನು ಪರಿಶೀಲಿಸಿ ಸಲ್ಲಿಸಿದಂತಹ ಶಿಫಾರಸ್ಸುಗಳ ಪೈಕಿ ವನಪಾಲಕ ವೃಂದದ ಹುದ್ದೆಯ ಪದನಾಮವನ್ನು ಪುನರ್ ಪದನಾಮೀಕರಿಸುವ ಬಗ್ಗೆ ಈ ಕೆಳಕಂಡಂತೆ ಶಿಫಾರಸ್ಸು ಮಾಡಿತು.

ವನಪಾಲಕ ವೃಂದದ ಪದನಾಮವನ್ನು ಉಪ ವಲಯ ಅರಣ್ಯ ಅಧಿಕಾರಿ (Deputy Range Forest Officer) ಎಂದು ಪುನರ್ ಪದನಾಮೀಕರಿಸಿ, ಪ್ರಸ್ತುತ ಈ ಹುದ್ದೆಯ ನೇರ ನೇಮಕಾತಿಗೆ ನಿಗಧಿಪಡಿಸಿರುವ ದ್ವಿತೀಯ ಪಿಯುಸಿ (ವಿಜ್ಞಾನ) ವಿದ್ಯಾರ್ಹತೆಯನ್ನು ಬದಲಾಯಿಸಿ,

ಸದರಿ ಹುದ್ದೆಯ ನೇರ ನೇಮಕಾತಿಗೆ BSc. (Forestry) ಪದವಿ ಸೇರಿದಂತೆ ವಿಜ್ಞಾನ ಪದವಿಯ ವಿದ್ಯಾರ್ಹತೆಯನ್ನು ನಿಗಧಿಪಡಿಸಿ ನೇರ ನೇಮಕಾತಿಗೆ ಶೇಕಡ 70 ರಷ್ಟು ಹುದ್ದೆಗಳನ್ನು BSc.(Forestry) ಪದವೀಧರರಿಗೆ ಮೀಸಲಿಡಲು ಹಾಗೂ ಇನ್ನುಳಿದ 30 ರಷ್ಟು ಹುದ್ದೆಗಳನ್ನು ವಿಜ್ಞಾನ ಪದವೀಧರರಿಂದ ಮೀಸಲಿಡಲು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಲು ಹಾಗೂ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದಂತೆ ಅರಣ್ಯ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿಯ ಬಗ್ಗೆ ವೃಂದ ಪರಿಶೀಲನಾ ಸಮಿತಿಯು ದಿನಾಂಕ : 11–07–2011 ರಂದು ಜರುಗಿದ ಸಭೆಯಲ್ಲಿ ಇತರೆ ವಿಷಯಗಳೊಂದಿಗೆ ವನಪಾಲಕರ ವೃಂದದ ಹುದ್ದೆಯನ್ನು ಉಪ ವಲಯ ಅರಣ್ಯ ಅಧಿಕಾರಿಯಾಗಿ ಎಂದು ಪುನರ್ ಪದನಾಮೀಕರಿಸಲು ತೀರ್ಮಾನಿಸಿರುತ್ತದೆ. ಆದುದರಿಂದ, ಈ ಹಿನ್ನೆಲೆಯಲ್ಲಿ ಅರಣ್ಯ ಇಲಾಖೆಯಲ್ಲಿನ ವನಪಾಲಕರ ಹುದ್ದೆಯನ್ನು ಇನ್ನು ಮುಂದೆ ಉಪ ವಲಯ ಅರಣ್ಯ ಅಧಿಕಾರಿ ಎಂದು ಪದನಾಮೀಕರಿಸಿ ಆದೇಶ ಹೊರಡಿಸಲು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 141 ಅಅಸೇ 2010, ಬೆಂಗಳೂರು, ದಿನಾಂಕ: 14–09–2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸನ್ನಿವೇಶಗಳಿಂದಾಗಿ ಅರಣ್ಯ ಇಲಾಖೆಯಲ್ಲಿನ ರೂ. 6250–125–6500–150–7100–175–7800–200–8600–225–9500–250–10500–300–12000 ವೇತನ ಶ್ರೇಣಿಯನ್ನು ಹೊಂದಿರುವ ವನಪಾಲಕರ ಹುದ್ದೆಯನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಉಪ ವಲಯ ಅರಣ್ಯ ಅಧಿಕಾರಿಯೆಂದು ಪುನರ್ ಪದನಾಮೀಕರಿಸಿದೆ. ಈ ಸಂಬಂಧ ಅರಣ್ಯ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಗಳಲ್ಲಿ ವನಪಾಲಕ ಹುದ್ದೆಗೆ ಅನ್ವಯಿಸುವಂತೆ, ಸೂಕ್ತ ತಿದ್ದುಪಡಿ ತರಲು ಪ್ರತ್ಯೇಕ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಸೇವೆಗಳು)

ಪಿಆರ್.ನಂ. 2507

## ಆರ್ಥಿಕ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರಿ ಪಿಂಚಣಿದಾರರು/ಕುಟುಂಬ ಪಿಂಚಣಿದಾರರಿಗೆ ತಾತ್ಕಾಲಿಕ ಪರಿಹಾರ ಮಂಜೂರಾತಿ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಆಇ (ವಿಶೇಷ) 265 ಪಿಇಎನ್ 2011, ಬೆಂಗಳೂರು, ದಿನಾಂಕ: 22 ನೇ ನವೆಂಬರ್ 2011.**

ರಾಜ್ಯ ಸರ್ಕಾರಿ ನೌಕರರ ಬೇಡಿಕೆಗಳನ್ನು ಪರಿಶೀಲಿಸಲು ದಿನಾಂಕ : 15–06–2011ರ ಸರ್ಕಾರಿ ಆದೇಶ ಸಂಖ್ಯೆ : ಅಇ 23 ಎಸ್‌ಆರ್‌ಪಿ 2011 ರಲ್ಲಿ, ಸರ್ಕಾರವು, ಅಧಿಕಾರಿ ವೇತನ ಸಮಿತಿಯನ್ನು ರಚಿಸಿದೆ. ಅಧಿಕಾರಿ ವೇತನ ಸಮಿತಿಯು, ವರದಿಯನ್ನು ಸಲ್ಲಿಸುವುದನ್ನು ಕಾಯ್ದಿರಿಸಿ, ರಾಜ್ಯ ಸರ್ಕಾರಿ ನಿವೃತ್ತ ವೇತನದಾರರಿಗೆ/ಕುಟುಂಬ ವೇತನದಾರರಿಗೆ, ಸ್ಥಳೀಯ ಸಂಸ್ಥೆಗಳ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತದಾರರಿಗೆ/ಕುಟುಂಬ ನಿವೃತ್ತದಾರರಿಗೆ ಹಾಗೂ ವಿಶ್ವವಿದ್ಯಾನಿಲಯಗಳ ಬೋಧಕೇತರ ನಿವೃತ್ತದಾರರಿಗೆ/ಕುಟುಂಬ ನಿವೃತ್ತದಾರರಿಗೆ ಅವರ ಮೂಲ ನಿವೃತ್ತಿ ವೇತನದ/ಕುಟುಂಬ ನಿವೃತ್ತಿ ವೇತನದ ಶೇಕಡ 15 ರಷ್ಟು ತಾತ್ಕಾಲಿಕ ಮಧ್ಯಂತರ ಪರಿಹಾರವನ್ನು ದಿನಾಂಕ : 1ನೇ ನವೆಂಬರ್ 2011 ರಿಂದ ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿದೆ.

2. ಅದರಂತೆ ಸರ್ಕಾರವು, ರಾಜ್ಯ ಸರ್ಕಾರಿ ನಿವೃತ್ತ ವೇತನದಾರರಿಗೆ/ಕುಟುಂಬ ವೇತನದಾರರಿಗೆ, ಸ್ಥಳೀಯ ಸಂಸ್ಥೆಗಳ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತದಾರರಿಗೆ/ಕುಟುಂಬ ನಿವೃತ್ತದಾರರಿಗೆ ಹಾಗು ವಿಶ್ವವಿದ್ಯಾನಿಲಯಗಳ ಬೋಧಕೇತರ ನಿವೃತ್ತಿದಾರರಿಗೆ/ಕುಟುಂಬ ನಿವೃತ್ತಿದಾರರಿಗೆ ಅವರ ಮೂಲ ನಿವೃತ್ತಿ/ಕುಟುಂಬ ನಿವೃತ್ತಿ ವೇತನದ ಶೇಕಡ 15 ರಷ್ಟು ತಾತ್ಕಾಲಿಕ ಪರಿಹಾರವನ್ನು ದಿನಾಂಕ : 1ನೇ ನವೆಂಬರ್ 2011 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಹರ್ಷಿಸುತ್ತದೆ.

3. ಯುಜಿಸಿ/ಎಐಸಿಟಿಇ/ಐಸಿಎಆರ್ ಮತ್ತು ಎಫ್ ಎನ್ ಜೆ ಪಿಸಿ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿದ್ದು, ದಿನಾಂಕ : 1–1–2006 ರ ನಂತರ ನಿವೃತ್ತರಾದ ಪಿಂಚಣಿದಾರರಿಗೆ ಈ ಆದೇಶವು ಅನ್ವಯವಾಗುವುದಿಲ್ಲ.

4. ತಾತ್ಕಾಲಿಕ ಪರಿಹಾರದ ಕಾರಣದಿಂದ ಸಂದಾಯ ಮಾಡಲು 50 ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಾಂಕಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಶಗಳನ್ನು ಕಡೆಗಣಿಸತಕ್ಕದ್ದು.

5. ಈ ಆದೇಶದ ಮೂಲಕ ಮಂಜೂರಾದ ತಾತ್ಕಾಲಿಕ ಪರಿಹಾರದ ಮೊತ್ತವನ್ನು ಯಾವುದೇ ಕಾರಣಕ್ಕೂ ತುಟ್ಟಿಭತ್ಯೆ ಅಥವಾ ಇನ್ನಿತರ ಉದ್ದೇಶಗಳಿಗೆ ಉಪಲಬ್ಧಗಳೆಂದು ಪರಿಗಣಿಸತಕ್ಕದ್ದಲ್ಲ.

6. ಈ ತಾತ್ಕಾಲಿಕ ಪರಿಹಾರದ ವೆಚ್ಚವನ್ನು ಪಿಂಚಣಿ ವೆಚ್ಚವನ್ನು ಭರಿಸುವ ಲೆಕ್ಕಶೀರ್ಷಿಕೆಯಲ್ಲಿಯೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪದ್ಮಾವತಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ)

## FINANCE SECRETARIAT

**Sub :** Grant of Interim Relief to State Government Pensioners and Family pensioners.

**Government Order No. FD (Spl) 265 PEN 2011, Bangalore, Dated 22nd November 2011.**

In G.O. No. FD 23 SRP 2011 dated 15-06-2011 Government have constituted an Offical Pay Committee for considering various demands of State Government employees. Pending receipt of the recommendations of the Official Pay Committee. Government have decided to sanction Interim Relief at the rate of 15% of basic pension/family pension with effect from 1st November 2011 to the State Government pensioners/family pensioners and pensioners/family pensioners of local bodies, aided educational institutions and retired non-teaching staff of the Universities.

2. Accordingly, Government are pleased to sanction Interim Relief at the rate of 15% of basic pension/family pension with effect from 1st November 2011 to the State Government pensioners/family pensioners and pensioners/family pensioners of local bodies and aided educational institutions and retired non-teaching staff of the Universities.

3. This order shall not be applicable to pensioners/family pensioners who were drawing pay in the UGC, AICTE, ICAR and FNJPC scales of pay and who retired on or after 1st January 2006.

4. The payment on account of Interim Relief involving fractions of fifty paise and above shall be rounded off to the next rupee and fractions less than fifty paise shall be ignored.

5. The amount of Interim Relief sanctioned in this order shall not count as emoluments for the purpose of dearness allowance or any other purpose.

6. The expenditure on Interim Relief will be booked under the same head of account from which pension is being drawn.

By Order and in the name of the Governor of Karnataka,

**Padmavathi**

Special Officer Ex-officio

deputy Secretary to Government,

Finance Department (Pension)

PR. 2653

## ಆರ್ಥಿಕ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರಿ ನೌಕರರಿಗೆ ತಾತ್ಕಾಲಿಕ ಪರಿಹಾರ ಮಂಜೂರಾತಿ

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 39 ಎಸ್‌ಆರ್‌ಪಿ 2011, ಬೆಂಗಳೂರು, ದಿನಾಂಕ: 18 ನೇ ನವೆಂಬರ್ 2011.**

ರಾಜ್ಯ ಸರ್ಕಾರಿ ನೌಕರರ ಬೇಡಿಕೆಗಳನ್ನು ಪರಿಶೀಲಿಸಲು ದಿನಾಂಕ : 15–06–2011ರ ಸರ್ಕಾರಿ ಆದೇಶ ಸಂಖ್ಯೆ : ಅಇ 23 ಎಸ್‌ಆರ್‌ಪಿ 2011 ರಲ್ಲಿ, ಸರ್ಕಾರವು, ಅಧಿಕಾರಿ ವೇತನ ಸಮಿತಿಯನ್ನು ರಚಿಸಿದೆ. ಅಧಿಕಾರಿ ವೇತನ ಸಮಿತಿಯು ವರದಿಯನ್ನು ಸಲ್ಲಿಸುವುದನ್ನು ಕಾಯ್ದಿರಿಸಿ, ಮೂಲ ವೇತನದ ಶೇಕಡ 15 ರಷ್ಟು ಮಧ್ಯಂತರ ಪರಿಹಾರವನ್ನು ಪೂರ್ಣಕಾಲಾವಧಿಯ ಕಾಲಿಕ ನಿಯತ ವೇತನ ಶ್ರೇಣಿಯಲ್ಲಿರುವ ರಾಜ್ಯ ಸರ್ಕಾರಿ ನೌಕರರಿಗೆ, ಸ್ಥಳೀಯ ಸಂಸ್ಥೆಗಳ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ನೌಕರರಿಗೆ ಹಾಗೂ ವಿಶ್ವವಿದ್ಯಾನಿಲಯಗಳ ಬೋಧಕೇತರ ಸಿಬ್ಬಂದಿಗೆ ದಿನಾಂಕ : 1ನೇ ನವೆಂಬರ್ 2011 ರಿಂದ ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿದೆ.

2. ಅದರಂತೆ ಸರ್ಕಾರವು, ಪೂರ್ಣಕಾಲಾವಧಿಯ ಕಾಲಿಕ ನಿಯತ ವೇತನ ಶ್ರೇಣಿಯಲ್ಲಿರುವ ರಾಜ್ಯ ಸರ್ಕಾರಿ ನೌಕರರಿಗೆ, ಅನುದಾನಿತ ಶಿಕ್ಷಣ ಸಂಸ್ಥೆಗಳ ಮತ್ತು ಸ್ಥಳೀಯ ಸಂಸ್ಥೆಗಳ ನೌಕರರಿಗೆ ಹಾಗೂ ವಿಶ್ವವಿದ್ಯಾನಿಲಯಗಳ ಬೋಧಕೇತರ ಸಿಬ್ಬಂದಿಗಳಿಗೆ ಅವರ ಮೂಲ ವೇತನದ ಶೇಕಡ 15 ರಷ್ಟು ತಾತ್ಕಾಲಿಕ ಪರಿಹಾರವನ್ನು ದಿನಾಂಕ 1ನೇ ನವೆಂಬರ್ 2011 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಹರ್ಷಿಸುತ್ತದೆ.

3. ಈ ಆದೇಶದ ಮೂಲಕ ಮಂಜೂರು ಮಾಡಿದ ತಾತ್ಕಾಲಿಕ ಪರಿಹಾರ ಸೌಲಭ್ಯವು ಪೂರ್ಣಕಾಲಾವಧಿಯ ಕಾಲಿಕ ನಿಯತ ವೇತನ ಶ್ರೇಣಿಯಲ್ಲಿರುವ ಈ ಕೆಳಗಿನವರಿಗೂ ಅನ್ವಯವಾಗುವುದು:

(1) ವರ್ಕ್ ಚಾರ್ಜ್ ಸಿಬ್ಬಂದಿ ನೌಕರರು

(2) ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುವ ನೌಕರರು

4. ಆದರೆ, ಈ ಆದೇಶಗಳು, ಯುಜಿಸಿ/ಎಐಸಿಟಿಇ/ಐಸಿಎಆರ್/ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಗಳನ್ನು ಹೊಂದಿರುವವರಿಗೆ ಹಾಗು ನಿವೃತ್ತಿಯ ತರುವಾಯ ಪುನರ್ ನೇಮಕಾತಿ ಹೊಂದಿರುವ ಅಥವಾ ಒಪ್ಪಂದದ ಆಧಾರದ ಮೇಲೆ ನೇಮಕಾತಿ ಹೊಂದಿರುವ ಅಥವಾ ಹೊರಗುತ್ತಿಗೆ ಆಧಾರದ ಸೇವೆಯ ಮೇಲೆ ನೇಮಿಸಲ್ಪಟ್ಟಿರುವ ವ್ಯಕ್ತಿಗಳಿಗೆ ಅನ್ವಯವಾಗುವುದಿಲ್ಲ.

5. ತಾತ್ಕಾಲಿಕ ಪರಿಹಾರ ಲೆಕ್ಕ ಹಾಕುವ ಉದ್ದೇಶಕ್ಕೆ "ಮೂಲವೇತನ" ಎಂದರೆ ಸರ್ಕಾರಿ ನೌಕರರು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಪಡೆಯುವ ವೇತನ ಅಥವಾ ಕರ್ನಾಟಕ ಸಿವಿಲ್ ಸೇವಾ (ಕಾಲಬದ್ಧ ಮುಂಬಡ್ತಿ) ನಿಯಮಗಳು, 1983ರಡಿ ಮಂಜೂರಾಗಿರುವ ಆಯ್ಕೆಕಾಲಿಕ ವೇತನ ಮತ್ತು ಕರ್ನಾಟಕ ಸಿವಿಲ್ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳು, 1991ರಡಿ ಹಿರಿಯ ವೇತನ ಶ್ರೇಣಿಯಲ್ಲಿ ಪಡೆಯುವ ವೇತನ ಮತ್ತು ಅದರಲ್ಲಿ ಈ ಮುಂದಿನವುಗಳನ್ನು ಒಳಗೊಳ್ಳುತ್ತದೆ :

(ಅ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವರಿಗೆ ಸ್ಥಗಿತ ಬಡ್ತಿಯನ್ನು ನೀಡಲಾಗಿದ್ದಲ್ಲಿ ಆ ಸ್ಥಗಿತ ವೇತನ ಬಡ್ತಿ.

(ಆ) 2007ರ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳ ನಿಯಮ 7ರ ಉಪ–ನಿಯಮ(3)ರ ಮೇರೆಗೆ ನೀಡಲಾಗಿರುವ ಯಾವುದೇ ವೈಯಕ್ತಿಕ ವೇತನ.

(ಇ) ದಿನಾಂಕ 9–5–2002ರ ಸರ್ಕಾರಿ ಆದೇಶ ಸಂಖ್ಯೆ ; ಆಇ 13 ಎಸ್‌ಆರ್‌ಪಿ 2002 ರನ್ವಯ 20 ವರ್ಷಗಳ ಸತತ ಸೇವೆಗಾಗಿ ಕಾಲಿಕ ವೇತನ ಶ್ರೇಣಿಯ ಗರಿಷ್ಠ ಹಂತವನ್ನು ಮೀರಿ ಹೆಚ್ಚುವರಿ ವೇತನ ಬಡ್ತಿಯನ್ನು ನೀಡಲಾಗಿದ್ದಲ್ಲಿ ಆ ಹೆಚ್ಚುವರಿ ವೇತನ ಬಡ್ತಿ.

6. ಮೇಲಿನ ಕಂಡಿಕೆ 5ರಲ್ಲಿ ನಿರೂಪಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ಧಗಳು ಮೂಲವೇತನಕ್ಕೆ ಸೇರತಕ್ಕದ್ದಲ್ಲ.

7. ಸ್ಥಾನಿಕ ಸಂಸ್ಥೆಗಳ (ಮುನಿಸಿಪಾಲಿಟಿಗಳು, ಮುನಿಸಿಪಲ್ ಕಾರ್ಪೋರೇಶನ್‌ಗಳ) ನೌಕರರಿಗೆ ಈ ಸೌಲಭ್ಯವನ್ನು ಮಂಜೂರು ಮಾಡುವುದರಿಂದಾಗಿ ಉಂಟಾಗುವ ವೆಚ್ಚವನ್ನು ಆಯಾ ಸ್ಥಾನಿಕ ಸಂಸ್ಥೆಗಳೇ ಭರಿಸತಕ್ಕದ್ದು.

8. ತಾತ್ಕಾಲಿಕ ಪರಿಹಾರದ ಕಾರಣದಿಂದ ಸಂದಾಯ ಮಾಡಲು ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಾಂಕಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

9. ಈ ಆದೇಶದ ಮೂಲಕ ಮಂಜೂರಾದ ತಾತ್ಕಾಲಿಕ ಪರಿಹಾರದ ಮೊತ್ತವು ವಿಶಿಷ್ಠ ಸಂಭಾವನೆಯಾಗಿದ್ದು, ಇದು ನಿವೃತ್ತಿ ಸೌಲಭ್ಯ/ತುಟ್ಟಿಭತ್ಯೆಯನ್ನು ನಿರ್ಧರಿಸುವಾಗ ಅಥವಾ ಬೇರೆ ಯಾವುದೇ ಉದ್ದೇಶಗಳಿಗೆ ಪರಿಗಣಿಸತಕ್ಕದ್ದಲ್ಲ.

10. ಈ ತಾತ್ಕಾಲಿಕ ಪರಿಹಾರದ ವೆಚ್ಚವನ್ನು ವೇತನ ವೆಚ್ಚವನ್ನು ಭರಿಸುವ ಲೆಕ್ಕ ಶೀರ್ಷಿಕೆಯಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2)

ಪಿ.ಆರ್.2654